# ರಾಯಬಾಗ ತಾಲೂಕಿನ ಹಾಲುಮತದ ದೈವಗಳು

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು

**ಶ್ರೀ ಟಿ. ಎಸ್. ಒಂಟಗ್ಗೋಡಿ**

ಶ್ರೀ ಸಿದ್ಧೇಶ್ವರ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ,
ಹಾರೂಗೇರಿ ಜಿ. ಬೆಳಗಾವಿ

ಮಾರ್ಗದರ್ಶಕರು

**ಡಾ. ಆರ್, ಬಿ. ಚಿಲುಮಿ**

ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ,,
ಹಾರೂಗೇರಿ ಜಿ. ಬೆಳಗಾವಿ



**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,**
**ಹಾರೂಗೇರಿ ಜಿ. ಬೆಳಗಾವಿ**

...ಕೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮

# ರಾಯಬಾಗ ತಾಲೂಕಿನ ಹಾಲುಮತದ ದೈವಗಳು

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನ ಸಂಪ್ರಬಂಧ)

ಸಂಶೋಧಕರು
ಶ್ರೀ ಟಿ. ಎಸ್. ಒಂಟಗೋಡಿ
ಶ್ರೀ ಸಿದ್ಧೇಶ್ವರ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ,
ಹಾರೂಗೇರಿ ಜಿ. ಬೆಳಗಾವಿ



ಮಾರ್ಗದರ್ಶಕರು
ಡಾ. ಆರ್, ಟಿ. ಚಿಲುಮಿ
ಶ್ರೀ ಜಿ. ಆರ್. ದರೂರ
ಸಂಶೋಧನ ಕೇಂದ್ರ,,
ಹಾರೂಗೇರಿ ಜಿ. ಬೆಳಗಾವಿ




ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,
ಹಾರೂಗೇರಿ ಜಿ. ಬೆಳಗಾವಿ
ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೮

# ಪ್ರಮಾಣ ಪತ್ರ

ರಾಯಬಾಗ ತಾಲೂಕಿನ ಹಾಲುಮತದ ದೈವಗಳು ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ಆರ್. ಬಿ. ಚಿಲಮಿ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದೂ ಹಾಗೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೧೦-೦೯-೨೦೦೮

**ಶ್ರೀ ಟಿ. ಎಸ್. ಒಂಟಗೂಡಿ**

**ಸಂಶೋಧನ ವಿದ್ಯಾರ್ಥಿ**

**ಶ್ರೀ ಬಿ.ಆರ್. ದರೂರ**

**ಸಂಶೋಧನ ಕೇಂದ್ರ, ಹಾರೂಗೇರಿ**

# ಧೃಢೀಕರಣ ಪತ್ರ

ಶ್ರೀ ಟಿ. ಎಸ್. ಬಂಟಗೌಡಿ ಇವರು ರಾಯಬಾಗ ತಾಲೂಕಿನ ಹಾಲುಮತದ ದೈವಗಳು ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ **ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದೂ ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೧೦–೦೯–೨೦೦೮

**ಡಾ. ಆರ್. ಬಿ. ಚಿಲಮಿ**
ಮಾರ್ಗದರ್ಶಕರು,
ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ

# • ಪರಿವಿಡಿ •

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ೧.೧ ಪ್ರವೇಶ :

" ತಲ್ಲಣಿಸದಿರು ಕಂಡ್ಯ ತಾಳು ಮನವೆ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ"

– ಇವು ಶ್ರೇಷ್ಠ ಕೀರ್ತನಕಾರ ಕನಕದಾಸರ ನುಡಿಗಳು. ಅಲ್ಲಿ ಕುರುಬರ ದೇವರ ಮೇಲಿನ ಪ್ರೀತಿ; ಅಪಾರ ನಂಬಿಕೆ ವ್ಯಕ್ತಪಡಿಸುವದರ ಜೊತೆಗೆ ಜಗದ ಇರುವೆಯಾದಿಯಾಗಿ ೮೪ ಕೋಟಿ ಜೀವ ರಾಶಿಗೆ ದೇವರ ಶ್ರೀರಕ್ಷೆಯನ್ನೂ, ನಂಬಿಕೆಯನ್ನೂ ಕೊಡುತ್ತಾರೆ. ಇಂಥ ಅನೇಕ ಜಾತಿ, ಧರ್ಮದಿಂದ ಕೂಡಿದ ಭಾರತ, ಈ ಎಲ್ಲ ಜಾತಿ ಧರ್ಮಕ್ಕೆ ಕುರುಬ ಜನಾಂಗ ಕಳಸವಿಟ್ಟಂತಿದೆ. ಕುರುಬ ಜನಾಂಗ ಜಾತಿಯೂ ಹೌದು, ಧರ್ಮವೂ ಹೌದು. ಅದಕ್ಕೆಂದೇ ಇವರ ಅನುಯಾಯಿಗಳನ್ನು ಹಾಲುಮತಸ್ಥರು, ಹಾಲುಮತದವರೆಂದು ಕರೆಯುವದು ವಾಡಿಕೆ.

ಇಂಥ ಹಾಲು ಮತಧರ್ಮ ಹಾಗೂ ಮತದ ಹಿನ್ನೆಲೆ, ಪರಂಪರೆ, ನಂಬಿಕೆಗಳು, ಆಚರಣೆಗಳು, ದೇವತೆಗಳು(ಗುರು–ಶಿಷ್ಯರ ಕಲ್ಪನೆ) ಅಗಾಧವಾಗಿ ಬೆಳೆದು ನಿಂತಿದೆ. ಇಂಥ ಬೃಹತ್ ಜನಾಂಗದ ಸಂಸ್ಕೃತಿಯ ಬಗ್ಗೆ ಅನೇಕ ಸಂಶೋಧನೆ ನಡೆದಿವೆ, ನಡೆಯುತ್ತಲೂ ಇವೆ.

ರಾಯಬಾಗ ತಾಲೂಕಿನಲ್ಲಿ ಪ್ರತಿಶತ ೬೦ ರಷ್ಟು ಕುರುಬ ಇದ್ದು; ಅನೇಕ ಕುರುಬ ದೇವತೆಗಳ ದೇವಸ್ಥಾನಗಳಿದ್ದುದಲ್ಲದೆ ಆಚರಣೆ, ಜಾತ್ರೆಗಳು ಅತ್ಯಂತ ವಿಜೃಂಬಣೆಯಿಂದ ನಡೆಯುವುದನ್ನು ನೋಡುತ್ತೇವೆ. ಕುರುಬ ಅಥವಾ ಹಾಲುಮತದ ದೈವಗಳ ಸಂಸ್ಕೃತಿಯ ಬಗ್ಗೆ ಜನಪದ ಸಾಹಿತ್ಯದಲ್ಲಿ ಸಾಕಷ್ಟು ಸಾಹಿತ್ಯ ಲಭ್ಯವಿದೆ. ಆದರೆ ಒಂದು ತಾಲೂಕು ಮಟ್ಟದ ಪರಿಮಿತಿಯಲ್ಲಿ ಹಾಲುಮತಕ್ಕೆ ಸಂಬಂಧಿಸಿದಂತೆ ನಮ್ಮ ರಾಯಬಾಗ ತಾಲೂಕಿನ ದೇವರುಗಳು/ ದೈವಗಳು, ಆಚರಣೆಗಳನ್ನು ಅಭ್ಯಸಿಸಿ, ಸಂಶೋಧಿಸಿ ಪರಿಚಯಿಸುವ ಕಾರ್ಯವೇ ಈ ಅಧ್ಯಯನದ ಉದ್ದೇಶ.

ರಾಯಬಾಗ ತಾಲೂಕಿನ ಕುರುಬ ಮತಸ್ಥರ ಪ್ರಮುಖ ದೈವಗಳಾದ ಚಿಂಚಲಿ ಮಾಯಕ್ಕ, ಕರೆಸಿದ್ಧೇಶ್ವರ, ಹಾಲಸಿದ್ಧೇಶ್ವರ, ರೇವಣಸಿದ್ಧೇಶ್ವರ, ಅಮೋಘಸಿದ್ಧೇಶ್ವರ, ಮಾಳಿಂಗರಾಯ, ಅರಣ್ಯಸಿದ್ಧೇಶ್ವರ,

ಯಲ್ಲಾಲಿಂಗ ದೇವರುಗಳ ಪರಿಚಯ ಮತ್ತು ಕ್ಷೇತ್ರ ಪರಿಚಯ ನೀಡುವುದು ಪ್ರಸ್ತುತ ಅಧ್ಯಯನದ ಮತ್ತೊಂದು ಉದ್ದೇಶ.

ಡಾ. ಸಿದ್ಧಲಿಂಗಯ್ಯನವರು "ಒಂದು ದೇವತೆಗೆ ಸಂಬಂಧಿಸಿದ ಹಾಡು, ಕಥೆ, ಐತಿಹ್ಯ, ದಂತ ಕಥೆ, ಪುರಾಣದಲ್ಲಿ ಆಯಾ ಜನಾಂಗ ಹಲವು ಸಮಸ್ಯೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಸಾಧ್ಯವಿದೆ. ಜೀವನ ಶೈಲಿ, ಚಿಂತನ ವಿಧಾನಗಳು ಅನಾವರಣಗೊಳ್ಳುತ್ತಾ ಹೋಗುತ್ತವೆ. ಜ್ಞಾನದ ವಿವಿಧ ಶಾಖೆಗಳು ಅಂದರೆ ಇತಿಹಾಸ, ಮನಃಶಾಸ್ತ್ರ, ಭಾಷಾಜ್ಞಾನ, ಸಮಾಜಶಾಸ್ತ್ರ ಇನ್ನಿತರ ಶಿಸ್ತುಗಳು ಈ ಬಗೆಯ ಅಧ್ಯಯನದಿಂದ ನೆರವನ್ನು ಪಡೆಯಬಹುದು"[೧] ಎಂದು ತಮ್ಮ "ಗ್ರಾಮದೇವತೆಗಳು" ಪುಸ್ತಕದಲ್ಲಿ ವಿವೇಚಿಸಿದ್ದಾರೆ.[೧] ಇದರಿಂದ ನಮಗೆ ಅರಿವು ಆಗುವುದೇನೆಂದರೆ ಗ್ರಾಮೀಣ ದೇವತೆಗಳಲ್ಲಿ "ಹಾಲುಮತ ದೈವಗಳ" ಪ್ರಮಾಣ ಹೆಚ್ಚಾಗಿದೆ. ಹಾಲುಮತ ದೈವಗಳ ಬಗ್ಗೆ ಈಗಾಗಲೇ ಸಾಕಷ್ಟು ಹಾಡು, ಕಥೆ, ಐತಿಹ್ಯ, ಪುರಾಣಗಳು ಇವೆ. ಹಾಲುಮತದ ರೀತಿನೀತಿಗಳ ಬಗ್ಗೆ ಸಾಕಷ್ಟು ಮಾಹಿತಿ ಸಿಗುತ್ತವೆ.

ರಾಯಬಾಗ ತಾಲೂಕಿನ ಹಾಲುಮತದ ದೈವಗಳ ಹಬ್ಬ, ಆಚರಣೆಗಳು, ನಂಬಿಕೆಗಳು ಹಲವು. ಅದಕ್ಕೆ ಸಂಬಂಧಿಸಿದಂತೆ ವಿಶಿಷ್ಟವೂ, ವೈವಿಧ್ಯಮಯವೂ ಆದ ಸಂಸ್ಕೃತಿ ಅದರ ಎಲ್ಲ ಮುಖಗಳನ್ನು ಗಮನಿಸಿ ಅದನ್ನು ಸಾಮಾಜಿಕ ಸಂದರ್ಭದಲ್ಲಿ ಅವುಗಳನ್ನು ಸಂಶ್ಲೇಷಿಸಿ; ವಿಶ್ಲೇಷಿಸುವ ಅಗತ್ಯ ಎದ್ದು ಕಾಣುತ್ತದೆ. ಈಗಿರುವ ನಂಬಿಕೆ, ಆಚರಣೆಗಳು ನಮ್ಮ ಅಧ್ಯಯನದಲ್ಲಿ ಪ್ರಮುಖ ಅಧ್ಯಯನದ ವಸ್ತುವಾಗಿವೆ.

ರಾಯಬಾಗ ತಾಲೂಕು ಅನೇಕ ಹಾಲುಮತ ದೈವಗಳನ್ನು ಹೊಂದಿರುವ ಪ್ರದೇಶವಾಗಿದೆ. ವೈವಿಧ್ಯಮಯವಾದ ಐತಿಹ್ಯ, ಕಥೆಗಳನ್ನು ಹೊಂದಿರುವ ಆಗರವೇ ಆಗಿದೆ. ಅನೇಕ ಪವಿತ್ರ ಸ್ಥಳಗಳ ಕೇಂದ್ರವಾಗಿದೆ. ಈ ಎಲ್ಲ ಆಚರಣೆಗಳ ಆಳವಾದ, ವ್ಯವಸ್ಥಿತವಾದ, ಗಂಭೀರವಾದ ಅಧ್ಯಯನಕ್ಕೆ ಪ್ರಯತ್ನಿಸಲಾಗಿದೆ.

ಈ ಆಚರಣೆಗಳ ಭಾಷೆ, ಸಂಕೇತಗಳು, ನಂಬಿಕೆಗಳು ಮತ್ತು ಇದರ ಮೂಲ ಹುಟ್ಟಿನ ಬಗ್ಗೆ ಪರಿಚಯ ನಮ್ಮ ಸಾರಸ್ವತ ಲೋಕಕ್ಕೆ ಆಗಬೇಕಾಗಿದೆ. ಅದನ್ನಿಲ್ಲಿ ಮಾಡಿಕೊಡಲು ಯತ್ನಿಸಲಾಗಿದೆ.

ಡಾ. ಸಿದ್ಧಲಿಂಗಯ್ಯ ಹೇಳಿರುವಂತೆ "ಗ್ರಾಮದೇವತೆಯೆಂದರೆ ಕೇವಲ ಧಾರ್ಮಿಕ ಆಚರಣೆ ಎಂದು ಭಾವಿಸುವುದಕ್ಕಿಂತ ಗ್ರಾಮ ಜೀವನದ ಹಲವು ಹತ್ತು ಮುಖಗಳನ್ನು ತೆರೆದು ತೋರಿಸುವ ಸಾಧನ ಎಂದು ಹೇಳುವುದೇ ಸೂಕ್ತ"[೨]

ರಾಯಬಾಗ ತಾಲೂಕು ಒಂದರಲ್ಲಿಯೇ ಪ್ರತಿವರ್ಷ ೫೦ಕ್ಕೂ ಹೆಚ್ಚು ಜಾತ್ರೆಗಳು ನಡೆಯುತ್ತವೆ. ಒಂದೇ ಗ್ರಾಮದಲ್ಲಿ ಹಾಲುಮತದ ಅನೇಕ ದೈವಗಳ ಜಾತ್ರೆ ನಡೆಯುವುದನ್ನು ಕಾಣುತ್ತೇವೆ. ಈ ಎಲ್ಲ

ಜಾತ್ರೆಗಳಿಗೆ ಸಾವಿರಾರು ಭಕ್ತರು ಸೇರುವುದನ್ನು ಕಂಡಾಗ ನಮಗೆ ಆಶ್ಚರ್ಯದ ಜೊತೆಗೆ ದೈವಗಳು ಸಮಾಜಕ್ಕೆ ಎಷ್ಟು ಅಗತ್ಯ ಎನ್ನುವುದು ತಿಳಿಯುತ್ತದೆ.

ಆದರೆ ಕಾಲಾಂತರದಲ್ಲಿ ಸಮಾಜದ ಜನಜೀವನದಲ್ಲಿ ಬದಲಾವಣೆಯನ್ನು ಕಾಣುತ್ತೇವೆ. ಅದರ ಜೊತೆಯಲ್ಲಿ ಗ್ರಾಮದೇವತೆಗಳಲ್ಲಿ ಹಾಲುಮತ ದೈವಗಳ ಸ್ವರೂಪ ಪೂಜೆ-ಪುನಸ್ಕಾರ, ಸಾಂಸ್ಕೃತೀಕರಣಕ್ಕೆ, ಒಳಗಾಗುತ್ತಿರುವುದನ್ನು ಕಾಣುತ್ತೇವೆ. ಇಂಥ ಬದಲಾವಣೆಯ ಸ್ವರೂಪದ ಅಧ್ಯಯನ ಸೂಕ್ತವಾದದ್ದಾಗಿದೆ.

## ೧.೨ ವ್ಯಾಪ್ತಿ ಮತ್ತು ಸ್ವರೂಪ :

ಇಂದು ನಾವು ಅಧ್ಯಯನಕ್ಕೊಳಪಡಿಸಿದ "ಹಾಲುಮತ ದೈವಗಳು" ಒಂದು ರೀತಿಯ ಜಾನಪದ ಅಧ್ಯಯನವೇ ಆಗಿದೆ. ಹಾಲುಮತಕ್ಕೆ ಸಂಬಂಧಿಸಿದಂತೆ ಕಥೆ, ಪುರಾಣ, ದಂತ ಕಥೆ, ಐತಿಹ್ಯ, ಆಚರಣೆ, ಹಾಡುಗಳನ್ನು ಗಮನದಲ್ಲಿಟ್ಟುಕೊಂಡು ಇಲ್ಲಿ ಅಧ್ಯಯನ ಮಾಡಲಾಗಿದೆ. ಇವುಗಳ ಪರಿಶೀಲನೆ, ಜನಪದ ಸಾಂಸ್ಕೃತಿಕ ಹಿನ್ನೆಲೆಯಲ್ಲಿಯೇ ಮಾಡಲಾಗುತ್ತಿದೆ. ರಾಯಬಾಗ ತಾಲೂಕನ್ನು ಕೇಂದ್ರವಾಗಿಟ್ಟುಕೊಂಡು "ಹಾಲುಮತ ದೈವಗಳ" ಸಮಗ್ರ ಅಧ್ಯಯನವನ್ನು ಸಂಕ್ಷಿಪ್ತವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

ಈಗಾಗಲೇ ಹಾಲುಮತದ ಬಗ್ಗೆ ಸಾಕಷ್ಟು ಪುಸ್ತಕಗಳು ಪ್ರಕಟವಾಗಿವೆ. ಆದರೆ ರಾಯಬಾಗ ತಾಲೂಕದ ಮಿತಿಯಲ್ಲಿ ಹಲವು ಹಾಲುಮತ ದೈವಗಳ ಪರಂಪರೆಯೇ ಇದೆ. ಅದರ ಅಗತ್ಯವನ್ನು ಗಮನಿಸಿ ಪ್ರಸ್ತುತ ವಿಷಯದ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

ರಾಯಬಾಗ ತಾಲೂಕಿನಾದ್ಯಂತ ಆಳವಾದ ಮತ್ತು ವ್ಯಾಪಕವಾದ ಕ್ಷೇತ್ರ ಕಾರ್ಯದ ನೆರವಿನಿಂದ, ಭಾವಚಿತ್ರ ಮತ್ತು ಸಂಪೂರ್ಣ ಮಾಹಿತಿ ಸಂಗ್ರಹಿಸಲಾಗಿದೆ. ಹಾಲುಮತ ದೇವ-ದೇವತೆಗಳ ಸಮೀಕ್ಷೆ ಮಾಡಲು ಪ್ರಯತ್ನಿಸಲಾಗಿದೆ. ಇಲ್ಲಿಯ ಪ್ರಮುಖ ದೇವತೆಗಳು ಈ ಕೆಳಗಿನಂತಿವೆ.

**೧. ಸ್ತ್ರೀ ದೈವಗಳು :**

**೧.೧ ಚಿಂಚಲಿ ಮಾಯಕ್ಕ**

**೧.೨ ಬೆಕ್ಕೇರಿ ಲಕ್ಷ್ಮೀದೇವಿ**

೨. ಪುರುಷ ದೈವಗಳು :

೨.೧ ಕಂಕಣವಾಡಿಯ ಶ್ರೀ ಹಾಲಸಿದ್ಧೇಶ್ವರ

೨.೧ ಶ್ರೀ ಅಮೋಘಸಿದ್ಧೇಶ್ವರ

೨.೩ ರಾಯಬಾಗದ ಶ್ರೀ ಬೀರೇಶ್ವರ

೨.೪ ಅಲಕನೂರಿನ ಶ್ರೀ ಕರಸಿದ್ಧೇಶ್ವರ

೨.೫ ಹಿಡಕಲ್ಲದ ಶ್ರೀ ರೇವಣಸಿದ್ಧೇಶ್ವರ

೨.೬ ಹಾರೂಗೇರಿಯ ಶ್ರೀ ಮಾಳಿಂಗರಾಯ

೨.೭ ಯಲ್ಪಾರಟ್ಟಿಯ ಶ್ರೀ ಅರಣ್ಯಸಿದ್ಧೇಶ್ವರ

೨.೮ ಮುಗಳಖೋಡದ ಶ್ರೀ ಯಲ್ಲಾಲಿಂಗೇಶ್ವರ

ಈ ಮೇಲ್ಕಾಣಿಸಿದ ಎಲ್ಲ ದೈವಗಳ ಅಧ್ಯಯನ ಮಾಡಲಾಗಿದೆ. ಹಾಲುಮತದಲ್ಲಿ ಪರಸ್ಪರ ತುಲನೆ ಮಾಡುವ ಮತ್ತು ಭಿನ್ನತೆ ಗುರುತಿಸುವ ಕಾರ್ಯ ಮಾಡಲಾಗಿದೆ. ಪ್ರಮುಖವಾಗಿ ಡೊಳ್ಳಿನ ಹಾಡುಗಳನ್ನು ಅಧ್ಯಯನದ ಮೂಲ ಆಕಾರವಾಗಿ ಸ್ವೀಕರಿಸಲಾಗಿದೆ.

## : ಟಿಪ್ಪಣಿಗಳು :

೧) ಗ್ರಾಮದೇವತೆಗಳು : ಲೇಖಕರು : ಡಾ. ಸಿದ್ದಲಿಂಗಯ್ಯ ಪುಟ-೧ : ಪ್ರ.ವರ್ಷ-೧೯೯೭

೨) ಅದೇ : ಪುಟ-೨

## ಅಧ್ಯಾಯ - ೨

# ಹಾಲುಮತ ದೈವಗಳ ಪರಿಕಲ್ಪನೆ

ಗ್ರಾಮ ದೇವತೆಗಳು ಜನಪದ ಬದುಕಿನ ಒಂದು ಭಾಗವೇ ಆಗಿವೆ. ನಿಸರ್ಗದಲ್ಲಿ ಕಂಡ ಅನೇಕ ಚಿತ್ರ-ವಿಚಿತ್ರ ವಸ್ತುಗಳಾದ ಸೂರ್ಯ, ಹುತ್ತ, ವೃಕ್ಷ, ವಿವಿಧ ಶಿಲೆ, ಜಲ, ಗಾಳಿ, ಬೆಂಕಿಯ ಬಗ್ಗೆ ಭಯ, ಭಕ್ತಿ, ಭೀತಿ ಹೊಂದಿದ್ದು ಅವುಗಳನ್ನು ಗ್ರಾಮೀಣ ಜನರು ಆರಾಧಿಸುತ್ತ ಬಂದರು. ಕಾಲಾಂತರದಲ್ಲಿ ಅವು ದೈವ ರೂಪ ಪಡೆದು ಗ್ರಾಮ ದೇವತೆಗಳಾಗಿ ಮಾರ್ಪಾಡ ಹೊಂದಿದ್ದದವು.

"ಅನೇಕ ಗ್ರಾಮದೇವತೆಗಳು ಅತಿ ಪ್ರಾಚೀನವಾದ ಭೂಮಿಪೂಜೆ ಅಥವಾ ಮಾತೃಪೂಜೆಯ ಕುರುಹುಗಳಲ್ಲದೆ ಬೇರೆಯಲ್ಲ. ಕೆಲವೊಮ್ಮೆ ಅವು ಫಲಶಕ್ತಿಯ ಸ್ಪಷ್ಟ ಪ್ರತೀಕಗಳಂತೆ ಕಾಣುತ್ತವೆ. ಅರಣ್ಯವಾಸಿಗಳಾದ ಬುಡಕಟ್ಟು ಜನಾಂಗಗಳು ಪೂಜಿಸುವ ಪ್ರೇತಾತ್ಮಗಳು, ಗ್ರಾಮ ಸಮುದಾಯಗಳು ಬೆಳೆದ ಮೇಲೆ ಗ್ರಾಮದೇವತೆಗಳಾಗಿ ಮಾರ್ಪಾಟು ಹೊಂದಿರುವ ಸಾಧ್ಯತೆಗಳಿವೆ ಅಥವಾ ಐತಿಹಾಸಿಕ ಕಾಲದಲ್ಲಿ ನಡೆದ ಕೆಲವು ಘಟನೆಗಳು ಹಾಗೂ ಆಕಸ್ಮಿಕಗಳು ಕೂಡ ಇಂಥ ದೇವತೆಗಳನ್ನು ಸೃಷ್ಟಿಸಿರಬಹುದು."[1] ಹೀಗೆ ಕೆಲವೊಂದು ಪುರಾಣ ಸೃಷ್ಟಿಯಾದರೆ ಇನ್ನೂ ಕೆಲವು ಮಾನವನ ಬದುಕಿನಲ್ಲಿ ಮಹಾಪುರುಷರಾಗಿ ಬೆಳೆದವರ ಬಗ್ಗೆ ಐತಿಹ್ಯ, ದಂತಕತೆಗಳೂ ಇರಬಹುದು.

ಮಾನವ ಸಂಘ ಜೀವಿಯಾಗಿ ವಾಸಿಸತೊಡಗಿದುದರ ಪರಿಣಾಮವಾಗಿ ಮನುಷ್ಯ ಮನುಷ್ಯರಲ್ಲಿ ಸಂಪರ್ಕ ಸಂಬಂಧಗಳು ವೃದ್ಧಿಯಾಗತೊಡಗಿದವು. ಅವುಗಳ ಪರಿಣಾಮದಿಂದ ಅನೇಕ ಬಗೆಯ ಸಂಸ್ಕಾರಗಳು ಅವರಲ್ಲಿ ಮೂಡಿಕೊಂಡು ಬಂದವು. ಮಾನವ ತನ್ನ ರಕ್ಷಣೆ ಹಾಗೂ ತನ್ನವರ ರಕ್ಷಣೆಗಾಗಿ ತಾನು ನೆಲೆಸುತ್ತಿದ್ದಲ್ಲಿ ಇರುವ ಪ್ರಕೃತಿ ದೇವತೆಗಳಿಗೆ ಮೊರು ಹೋದನು.

"ತನ್ನ ಕಲ್ಪನೆಯಂತೆ ಅವುಗಳಿಗೆ ನಾಮಕರಣ ಮಾಡುತ್ತಾ ಆರಾಧನೆಯನ್ನು ಮಾಡಲಾರಂಭಿಸಿದ. ತನ್ನ ಕಲ್ಪನಾ ರೀತಿಯಲ್ಲಿ ಅವುಗಳಿಗೆ ಮೂರ್ತಿ ರೂಪವನ್ನು ನೀಡಿದ. ಅವುಗಳ ಆರಾಧನೆಯಿಂದ ತಾನು ಸುಖಿಯಾಗಿರುವುದಾಗಿ ಮಾನಸಿಕ ಸಮಾಧಾನ ಪಡೆದುಕೊಂಡನು. ಬರಬರುತ್ತಾ ಆ ಕಲ್ಪನೆ ಬೆಳೆದು ಪೂಜೆಯ ಪ್ರಮಾಣವು ಹೆಚ್ಚಾಯಿತು. ಅಂತೆಯೇ ಗ್ರಾಮಗಳ ದೇವತೆಗಳ ಸಂಖ್ಯೆಯು ಹೆಚ್ಚುತ್ತ ಹೋಯಿತು. ಇದರಿಂದಲೇ 'ಗ್ರಾಮದೇವತೆಗಳು' ಎನ್ನುವ ಕಲ್ಪನೆ ಮೂಡಿ ಬಂದಿರುವ ಸಾಧ್ಯತೆಗಳಿವೆ."

ಭಾರತೀಯ ಸಂಸ್ಕೃತಿಯ ಅಂತರಾಳದಲ್ಲಿ 'ಸ್ತ್ರೀಗೆ ಉಚಿತ ಸ್ಥಾನವಿದೆ. ಅನೇಕ ವೀರ ಸ್ತ್ರೀಯರು ತಮ್ಮ ಗಂಡನ ಸಾವಿನಿಂದ ಸತಿ ಹೋದವರು. ಆತ್ಮಹತ್ಯೆ ಮಾಡಿಕೊಂಡವರು, ಅಪಘಾತಕ್ಕೆ ಒಳಗಾದವರು, ವಿವಿಧ ಕಾರಣಕ್ಕಾಗಿ ತಮ್ಮನ್ನೇ ತಾವು ಬಲಿಕೊಟ್ಟ ಸಂಗತಿಗಳು ಉಂಟು. ಇಂಥವರು ಚರಿತ್ರೆಯ ಹಾಗೂ ಧರ್ಮದ ನಂಬಿಕೆಯಲ್ಲಿ ಗ್ರಾಮದೇವತೆಗಳಾಗಿ ರೂಪಗೊಳ್ಳುವ ಸಾಧ್ಯತೆಯೂ ಇದೆ. ವ್ಯಕ್ತಿಗಳ ಸುತ್ತ ಹರಡಿಕೊಂಡಿರುವ ಐತಿಹ್ಯ ಹಾಗೂ ಸ್ಥಳದ ಮೇಲಿಂದ ಹುಟ್ಟಿದ ಐತಿಹ್ಯಗಳ ಆಧಾರದ ಮೇಲೆ ಕೆಲವೊಂದು ದೇವತೆಗಳು ಉದಯವಾಗಿರಬಹುದು. ವೀರಪುರುಷ, ಚಾರಿತ್ರಿಕ ವ್ಯಕ್ತಿ, ಪವಾಡ ಪುರುಷ, ಮಹಾತ್ಮ ಈ ಹಿನ್ನೆಲೆಯಲ್ಲಿಯೂ ಕುಲದೇವತೆಗಳು ಉಗಮವಾಗಿರಬಹುದು. ಜನರಿಗೆ ಉಂಟಾಗುವ ತೊಂದರೆಯ ನಿವಾರಣೆಗಾಗಿ ಹಲವಾರು ದೇವತೆಗಳು ಹುಟ್ಟಿಕೊಂಡು ಬಂದವು' ಎಂಬ ವಾದವನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ.

ಕನ್ನಡ ನಾಡಿನಲ್ಲಿಯೂ ಇಂಥ ಗ್ರಾಮದೇವತೆಗಳ ಸಂಖ್ಯೆಗೆ ಲೆಕ್ಕವಿಲ್ಲ. ಈ ಎಲ್ಲಾ ದೇವತೆಗಳ ಮೂಲವು ಪಾರ್ವತಿಗೆ ಹೋಗುತ್ತದೆ. ಶಕ್ತಿ ದೇವತೆಯ ವಿವಿಧ ರೂಪಗಳೇ ಈ ಎಲ್ಲಾ ದೇವತೆಗಳಿಗೆ ಮೂಲ ಎನ್ನುವ ಅಭಿಪ್ರಾಯವೂ ಇದೆ. ಆದರೆ ಅನೇಕ ಗ್ರಾಮದೇವತೆಗಳನ್ನು ಅವುಗಳ ಸ್ಥಳ ಕಥೆಗಳನ್ನು, ವಿವರಗಳನ್ನು ನೋಡಿದಾಗ ಆಯಾ ಪ್ರದೇಶದ ವ್ಯಕ್ತಿ ಮೂಲವು ಆಗಿರುವಂತೆ ಕಂಡು ಬರುತ್ತದೆ. ಗ್ರಾಮದ ಆಧಿದೈವವಾಗಿ ಆ ದೈವವನ್ನು ಪ್ರತಿಯೊಂದು ಗ್ರಾಮದವರು ತಮಗಾಗಿ ಸೃಷ್ಟಿಸಿ, ಸ್ಥಾಪಿಸಿ ಆರಾಧನೆ ಆರಂಭಿಸಿದ್ದರಿಂದಲೇ ಪ್ರತೀ ಗ್ರಾಮಕ್ಕೂ ಒಂದು ಗ್ರಾಮದೇವತೆ ಕಂಡು ಬರುತ್ತದೆ.

ಭಾರತದ ಹಿಂದೂ ಸಮಾಜದಲ್ಲಿ ಗ್ರಾಮದೇವತೆಗಳೇ ಜನರ 'ಧನ್ವಂತರಿ'ಯಾಗಿ ಕಾರ್ಯ ಮಾಡಿವೆ. ಅವಳು ಸಿಟ್ಟಾದರೆ ಕಷ್ಟ, ಸಂಕಟ, ರೋಗ-ರುಜಿನಗಳಿಗೆ ಕಾರಣಳಾಗುತ್ತಾಳೆ. ಅವುಗಳ ನಿವಾರಕಗಳು ಅವಳೇ ಎಂಬ ನಂಬಿಕೆ ನಮ್ಮ ಹಳ್ಳಿಗರಲ್ಲಿದೆ. ಅವಳ ಆರಾಧನೆಯ ಫಲವಾಗಿ ನಡೆಯುವ ಹಬ್ಬ, ಜಾತ್ರೆಗಳು ವಿಶಿಷ್ಟವಾದ ಸಾಂಸ್ಕೃತಿಕ ಮೌಲ್ಯಗಳನ್ನು ಹೊಂದಿವೆ. ಇಂತಹ ಹಬ್ಬ ಜಾತ್ರೆಗಳು ಕೇವಲ ಮೋಜಿನ ಆಟಗಳಾಗಿರದೆ ಧಾರ್ಮಿಕ ಹಿನ್ನೆಲೆಯಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಹತ್ವ ಅಡಗಿದೆ. ಆದುದರಿಂದಲೇ ಜನಪದಿಗರಾದ ನಮಗೆ 'ಗ್ರಾಮದೇವತೆ' ಮುಖ್ಯವಾಗುತ್ತದೆ.

ದೇಶದ ಮೂಲೆ ಮೂಲೆಯಲ್ಲಿ ಸ್ಥಾಪಿತ ಗ್ರಾಮದೇವತೆಗಳಿಗೆ ಹೆಸರುಗಳು ಬೇರೆ ಬೇರೆಯಾಗಿದ್ದರೂ ಅವುಗಳ ಸ್ವರೂಪದಲ್ಲಿ ಸಾಮ್ಯತೆಯಿದೆ. ಕರ್ನಾಟಕದಲ್ಲಿಯೂ ಸಹ ಅವಳು ವಿವಿಧ ಹೆಸರುಗಳಲ್ಲಿ ಕರೆಯಲ್ಪಡುತ್ತಾಳೆ. ಈ ದೇವತೆಗಳಿಗೆ ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರುಗಳು ಇವೆ. ಪೆದ್ದಮ್ಮ, ಮಾರಮ್ಮ, ಅಣ್ಣಮ್ಮ, ನೂಕಲಮ್ಮ, ದುರಗಮ್ಮ, ಕರಿಯಮ್ಮ, ಕಾಳಮ್ಮ, ಕೆಂಚಮ್ಮ ಇತ್ಯಾದಿ ಹೆಸರುಗಳು ಇವೆ.

## ೨.೧ ಸ್ತ್ರೀ ದೇವತೆ :

ಹೆಚ್ಚಾಗಿ ಸ್ತ್ರೀ ದೇವತೆಗಳು ಉಗ್ರ ಸ್ವರೂಪವುಗಳಾಗಿದ್ದು, ಸ್ಥಳೀಯರೆ ಅವುಗಳ ಪೂಜಾರಿಗಳಾಗಿ ಇರುವುದು ಕಂಡು ಬರುತ್ತದೆ. ಜನರಲ್ಲಿ ಅವುಗಳ ಬಗೆಗೆ ಭಯದ ಜೊತೆಗೆ ಆರಾಧನೆಯ ಗಟ್ಟಿ ನಿಲುವು ಇದೆ. ಎಮ್ಮೆ ಕರು ಹಾಕಿದರೆ ಅದು ಮಾರಿಯ ಜಾತ್ರೆಯ ಮೀಸಲು, ಕೋಳಿ ಹಿಂಡಿನಲ್ಲಿಯ ಹಿರಿಯ ಹುಂಜ ಮಾರಿಯ ಬಲಿಗೆ, ರಾಸಿ ಮಾಡಿದ ಕಾಳು ಗ್ರಾಮದೇವತೆಯ ಉಡಿ ತುಂಬುವುದಕ್ಕೆ, ಎಮ್ಮೆ, ಹಸು ಕರು ಹಾಕಿದಾಗ ಮೊದಲ ಗಿಣ್ಣುಹಾಲು ದೇವಿಗೆ ಸಲ್ಲಬೇಕು ಎಂಬ ಆಚರಣೆಗಳು ಇಂದೂ ಸಹ ನಮ್ಮ ನಡುವೆ ಇವೆ. ಅಂತಹ ಗ್ರಾಮದೇವತೆಗಳ ಮಹಿಮೆಯನ್ನು ತಮ್ಮದೇ ಆದ ಜನಪದ ಭಾಷೆಯಲ್ಲಿ ಸಾರುವ ಕಥಾನಕವಾಗಿ ವರ್ಣಿಸಬಲ್ಲ ಜನ ಇಂದು ಹಳ್ಳಿಗಳಲ್ಲಿ ಇದ್ದಾರೆ.

ಸ್ತ್ರೀ ದೇವತೆ ಆ ಗ್ರಾಮದ ಜನರ ಜೀವನದಲ್ಲಿ ಎಷ್ಟು ಹಾಸು ಹೊಕ್ಕಾಗಿದ್ದಾಳೆಂದರೆ ಅವರ ಪ್ರತಿಯೊಂದು ಕಾರ್ಯದಲ್ಲಿ ಅವಳ ಪಾಲಿದೆ. ಮಳೆ, ಬೆಳೆ, ರೋಗ ರುಜಿನ, ಶಾಂತಿ, ಆಸ್ತಿ, ಮದುವೆ, ಮಕ್ಕಳು ಎಲ್ಲದರಲ್ಲಿ ಅವಳ ಪಾತ್ರವಿದೆ ಎಂಬ ಭಾವನೆ ಅವರದಾಗಿದೆ. ಅವಳನ್ನು ಪ್ರಸನ್ನಗೊಳಿಸಲು ಹಬ್ಬ ಹರಿದಿನಗಳನ್ನು, ವಿವಿಧ ರೀತಿಯ ಹರಕೆಗಳನ್ನು, ಉತ್ಸವಗಳನ್ನು ಮಾಡುತ್ತಾ ಅವರು ಬಂದಿದ್ದಾರೆ.

ಈ ಮೇಲಿನ ಸ್ತ್ರೀ ದೇವತೆಗಳ ಸಾಲಿನಲ್ಲಿ ನಿಲ್ಲಬಹುದಾದ ಬೆಳಗಾವಿ ಜಿಲ್ಲೆಯ ರಾಯಬಾಗ ತಾಲ್ಲೂಕಿನ 'ಚಿಂಚಲಿ ಮಾಯಕ್ಕನ' ಹಿನ್ನೆಲೆ, ನಂಬಿಕೆ, ಆರಾಧನೆ ಇವುಗಳ ಜಾನಪದ ನೋಟವೇ ಇಲ್ಲಿದೆ. ಮಾಯವ್ವ, ಮಾಯಕ್ಕ, ಮಾಯಮ್ಮ ಮಾಯಕಾರತಿ, ಮಹಾಕಾಳಿ, ಮಾಯಿ ಎಂದೆಲ್ಲ ಕರೆಯಿಸಿಕೊಳ್ಳುವ ದೇವಿಯ ಸಾಂಸ್ಕೃತಿಕ ಪರಿಚಯ ಮಾಡಿಸುವುದೇ ನನ್ನ ಮುಖ್ಯ ಗುರಿಯಾಗಿದೆ.

### ೨.೧.೧ ಚಿಂಚಲಿಯ ಶ್ರೀ ಮಾಯಕ್ಕದೇವಿ :

ಬೆಳಗಾವಿ ಜಿಲ್ಲೆಯ ರಾಯಬಾಗ ತಾಲೂಕಿನಲ್ಲಿ ಹಲವಾರು ಹಾಲುಮತ ದೇವತೆಗಳು ಕಂಡು ಬರುತ್ತವೆ. ರಾಯಬಾಗ ತಾಲೂಕು ವಿಶಿಷ್ಟ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಪುಟ್ಟ ಪುಟ್ಟ ಬೆಟ್ಟಗಳಿಂದೊಡಗೂಡಿದ ವಿಶಾಲ ಬಯಲಿನಲ್ಲಿ ಮೈಚಾಚಿಕೊಂಡಿದೆ. ಇದು ಹಿರಿಹೊಳೆಯ ಸಮೀಪವಿದೆ. 'ನಸು ಕೆಂಪು ಬಣ್ಣದ' ಈ ಮಣ್ಣಿನ ವಿಶಾಲ ಮೈದಾನ ಒಂದು ಕಾಲಕ್ಕೆ ಕುರುಚಲು ಕಾಡಾಗಿರಬಹುದು. ಪಶುಪಾಲನೆ ಜನರ ಮುಖ್ಯ ಉದ್ಯೋಗವಾಗಿದೆ. ಇಲ್ಲಿ 'ಹಾಲುಮತ'ದ ಜನರು ಬಹಳ ಸಂಖ್ಯೆಯಲ್ಲಿದ್ದಾರೆ. 'ಬಾಗೆನಾಡು' ಎಂದು ಹೆಸರಾಗಿದ್ದ ರಾಯಬಾಗ ತಾಲ್ಲೂಕು 'ಹಾಲುಮತ ಪರಂಪರೆಯ ತೊಟ್ಟಿಲು' ಬಾಗೆನಾಡದ ಬಣ್ಣದ ಮಾಯವ್ವನ ಚಿಂಚಲಿ ಕರ್ನಾಟಕದ ಶಕ್ತಿ ಕೇಂದ್ರಗಳಲ್ಲೊಂದು. ಬಣ್ಣದ ಮಾಯವ್ವನ ಚೆನ್ನಿಗತಮ್ಮ, ಬೀರಣ್ಣ ದೇವರು. ಚಿಂಚಲಸೂರ ವನದೇವತೆಯನ್ನು ಕೊಂದು ಚಿಂಚಲಿಯ ಹಕ್ಕು ಮಾಯವ್ವನಿಗೆ ದಕ್ಕುವಂತೆ ಮಾಡಿದನೆಂದು 'ಜನಪದ ಹಾಲುಮತ ಕಾವ್ಯ' ದಲ್ಲಿ ಹೇಳಲಾಗಿದೆ.

ಕರ್ನಾಟಕ ಮತ್ತು ಮಹಾರಾಷ್ಟ್ರದ ಕುರುಬ ಜನಾಂಗದಿಂದ ಪೂಜೆಗೊಳ್ಳುವ ಮಾಯವ್ವ ಅಥವಾ ಮಾಯಕ್ಕ ಬಹುಜನ ಭಕ್ತರನ್ನು ಹೊಂದಿದ ಶಕ್ತಿ ದೇವತೆ. ಮಾಯಕ್ಕನ ದೇವಸ್ಥಾನ ನಮ್ಮ ಬೆಳಗಾವಿ ಜಿಲ್ಲೆಯ ರಾಯಬಾಗ ತಾಲೂಕಿನ ಚಿಂಚಲಿಯಲ್ಲಿದೆ. ದೇವತೆಯ ಬಗ್ಗೆ ಐತಿಹ್ಯ ಜಾನಪದ ಕಥೆಗಳು ಅನೇಕ ಇವೆ.

ದೇವೇಂದ್ರರಾಯ ಮತ್ತು ಸುಭದ್ರೆಯರ ಏಳನೆಯ ಹೆಣ್ಣುಮಗುವಾಗಿ ಮಾಯವ್ವ ಸ್ವರ್ಗದಲ್ಲಿ ಜನಿಸುತ್ತಾಳೆ. ಆದರೆ ಹುಟ್ಟಿದ ವೇಳೆ ಸರಿಯಿಲ್ಲ ಎಂಬ ಭವಿಷ್ಯ ಬಂದುದರಿಂದ ಬಂಗಾರದ ಪೆಟ್ಟಿಗೆಯಲ್ಲಿ ಹಾಕಿ ಭೂಮಿಯ ಮೇಲೆ ನದಿಯಲ್ಲಿ ತೆಪ್ಪದಲ್ಲಿ ಬಿಡುತ್ತಾರೆ. ಅದರ ಮೇಲೊಂದು ದೀಪ ಇಡುತ್ತಾರೆ. ದೀಪ ಕಣ್ಣಿಗೆ ಕಾಣುವವರೆಗೂ ತಾಯಿ–ತಂದೆಗಳು ನೋಡಿ ಮರೆಯಾಗುತ್ತಾರೆ. ನದಿಯ ದಡಕ್ಕೆ ತಪಸ್ಸಿಗೆ ಕುಳಿತಿದ್ದ ಋಷಿಗೆ ಬಂಗಾರದ ಪೆಟ್ಟಿಗೆ ದೊರೆಯುತ್ತದೆ. ಪೆಟ್ಟಿಗೆಯನ್ನು ತೆರೆದು ಋಷಿಗಳು ಹೆಣ್ಣು ಮಗುವನ್ನು ಕಾಣುತ್ತಾರೆ. ಅಷ್ಟರಲ್ಲಿ ಕುರಿಗಳನ್ನು ಮೇಯಿಸುತ್ತ ಬಂದ ದಿಬ್ಬಿಯ 'ದಿಬರಾಯನ' ಏಳು ಜನ ಹೆಣ್ಣು ಮಕ್ಕಳಿಗೆ ಋಷಿ ಈ ಕೂಸನ್ನು ಒಪ್ಪಿಸುತ್ತಾನೆ. ಕೂಸಿನೊಂದಿಗೆ ಕುರಿಗಳನ್ನು ಹೊಡೆದುಕೊಂಡು ಸಾಯಂಕಾಲ ದೊಡ್ಡಿಗೆ ಹೋಗುತ್ತಾರೆ. ಇಡೀ ಕುರಿಹಿಂಡಿನ ಲಕ್ಷಣವೇ ಬದಲಾಗುತ್ತದೆ. ಬೆಳಗಾಗುವುದರಲ್ಲಿ ಆದ ಬದಲಾವಣೆ ದಿಬರಾಯನ ಗಮನಕ್ಕೆ ಬರುತ್ತದೆ. ಇದಕ್ಕೆಲ್ಲ ಕಾರಣ ತಮಗೆ ದೊರೆತ ಮಗು ಎಂಬ ಭಾವನೆಯನ್ನು ಮಕ್ಕಳು ವ್ಯಕ್ತಪಡಿಸುತ್ತಾರೆ. ಆಗ ದಿಬ್ಬರಾಯ ತನ್ನ ಹೆಂಡತಿ ಶಾಂಬಾಯಿಗೆ ಕರೆದು ಕೂಸನ್ನು ಜೋಪಾನ ಮಾಡುವ ಜವಾಬ್ದಾರಿಯನ್ನು ವಹಿಸಿ, ಉಡಿಯಲ್ಲಿ ಹಾಕುತ್ತಾನೆ. ಸಂಭ್ರಮದಿಂದ ಜೋಗುಳ ಕಾರಣ ಮಾಡಿ, 'ಮರ್ತ್ಯಕ್ಕೆ ಮಾಯವಾಗಿ ಬಂದುದರಿಂದ 'ಮಾಯವ್ವ'ನೆಂಬ ಹೆಸರನ್ನು ಆಕೆಗೆ ಇಡುತ್ತಾರೆ.'

ದಿನದಿನಕ್ಕೂ ಕುರಿಗಳ ಲಕ್ಷಣ ಬದಲಾಗಿ ದಿಬರಾಯನ ಏಳು ಹಿಂಡು ಕುರಿಗಳು ಫಲಕೊಡುತ್ತವೆ. ಇದರಿಂದ ಆತ ಇನ್ನಷ್ಟು ಶ್ರೀಮಂತನಾಗುತ್ತಾನೆ. ಇದೆಲ್ಲ ಭಾಗ್ಯ ಒದಗಿಬಂದುದು ಮಾಯವ್ವನಿಂದಲೇ ಎಂಬ ಭಾವನೆ ಆ ಮನೆಯವರಲ್ಲಿ ಬರುತ್ತದೆ. ಮಾಯವ್ವ ದಿನದಿನಕ್ಕೆ ಬೆಳೆದು ದೊಡ್ಡವಳಾದಳು. ಗಗ್ಗರಿ ಉಡುವ, ಮೋಲಕ ತೊಡುವ ವಯಸ್ಸಿಗೆ ಬಂದಳು. ಏಳು ಹಿಂಡು ಕುರಿಗಳನ್ನು ತಾನೇ ಕಾಯುವದಾಗಿ ಹಟಹಿಡಿದಳು. ನೀನಿನ್ನೂ ಚಿಕ್ಕವಳು ಮನೆಯಲ್ಲಿ ಆಡುತ್ತಿರು ಎಂದರೆ ಕೇಳದೆ ಹಟಹಿಡಿದುದರಿಂದ ದಿಬರಾಯ ಆಗಲಿ ಎಂದನು. ದುಂಡುಳ್ಳ ಬಡಿಗೆ ಕೈಯಲ್ಲಿ ಹಿಡಿದು, ಏಳು ಹಿಂಡು ಕುರಿಗಳನ್ನು 'ಕಾಡರುದ್ರ' ಭೂಮಿ ಎನಿಸಿಕೊಂಡ ಕೊದಲಿಗೆ ನಂದನ ಬನಕ್ಕೆ ಹೊಡೆದಳು. ಹೀಗೆ ಮಾಯವ್ವ ಕುರಿಕಾಯುತ್ತ ಇರಬೇಕಾದರೆ, ಆಕೆಯ ಆರು ಜನ ಅಕ್ಕಂದಿರು ಸ್ವರ್ಗದಿಂದ ಇಳಿದು ಬಂದು ಮಾಯವ್ವನನ್ನು ದಿನಾಲು ಹುಡುಕುತ್ತಿದ್ದರು. ಒಂದು ದಿನ 'ಕಾಡರುದ್ರ' ಭೂಮಿಗೆ ಬಂದರು. ಮಾಯವ್ವ ತಿರುಗಾಡುತ್ತ ಇರಬೇಕಾದರೆ ಆಕೆಯ ಒಂದು ಹೆಜ್ಜೆ ಭಂಡಾರದು, ಇನ್ನೊಂದು ಹೆಜ್ಜೆ ಕುಂಕುಮದು ಇರುವದನ್ನು ಗಮನಿಸಿ, ಈಕೆಯೇ ತಂಗಿ ಎಂದು ಹಿರಿಯಕ್ಕಳಾದ ಅಕ್ಕವ್ವ ಗುರುತಿಸುವಳು. ಮಾಯವ್ವನನ್ನು ಹಿಡಿದು 'ನೀನು ನನ್ನ ತಂಗಿ' ಎಂದಳು. ಇಬ್ಬರೂ ಮಾತನಾಡುತ್ತಿರುವಾಗ ಸ್ವರ್ಗಕ್ಕೆ ಹಿಂತಿರುಗುವ ವೇಳೆಯಾದುದರಿಂದ – ಅಕ್ಕವ್ವ ಕರೆದರೂ

ಬರಲಿಲ್ಲವಾದ್ದರಿಂದ ಉಳಿದ ಐವರೂ ಹಿಂತಿರುಗಿ ಹೋದರು. ಅಕ್ಕವ್ವ (ಲಕ್ಷಮ್ಮಾ) ಮಾಯವ್ವನ ಜೊತೆಗೇ ಉಳಿದಳು.

ಅಕ್ಕವ್ವ (ಲಕ್ಷಮ್ಮಾ)ನನ್ನು ಕರೆದುಕೊಂಡು ಮನೆಗೆ ಹೋದಾಕೆ, ತಂದೆಗೆ ತಾನು ಯಾರ ಮಗಳು ಎಂದು ಪ್ರಶ್ನಿಸಿದಳು. ಇಕ್ಕಟ್ಟಿಗೆ ಸಿಕ್ಕಿಕೊಂಡ ತಂದೆ ನಿಜ ಸಂಗತಿ ಹೇಳಿದನು. ಹೀಗಾಗಿ ಅಕ್ಕವ್ವ ತನ್ನ ಒಡಹುಟ್ಟಿದ ಅಕ್ಕನೆಂಬುದು ಖಾತ್ರಿಯಾಯಿತು. ಮಾಯವ್ವ ಈಗ ತನ್ನ ಅಕ್ಕನೊಂದಿಗೆ ಜೀವಿಸಲು ಬಯಸಿದುದರಿಂದ, ದಿಬರಾಯ ಒಂದು ಹಿಂಡು ಕುರಿಗಳನ್ನು ಮಾಯವ್ವನಿಗೆ ಕೊಟ್ಟನು. ಜೊತೆಗೆ ತನ್ನ ಆಧೀನದಲ್ಲಿರುವ ಚಂದನಗಿರಿಯಲ್ಲಿ ವಾಸವಾಗಿರುವಂತೆ ಮಾಯವ್ವಳಿಗೆ ಹೇಳಿದನು. ತಂದೆಯ ಸೂಚನೆಯಂತೆ ಹಿಂಡು ಕುರಿಯೊಂದಿಗೆ ಬಂದು, ಚಂದನಗಿರಿಯಲ್ಲಿ ಅಕ್ಕನೊಂದಿಗೆ ಇರಹತ್ತಿದಳು.

ಈಗ ಅಕ್ಕವ್ವ-ಮಾಯವ್ವ ಕೂಡಿ ಕಾಡರುದ್ರ ಭೂಮಿ ಕೊದಲಿಗೆ ನಂದನ, ಬನದಲ್ಲಿ ಕುರಿಗಳನ್ನು ಮೇಯಿಸುತ್ತಿದ್ದರು. ಒಂದು ದಿನ ಮಧ್ಯಾಹ್ನ ಕಂಚಿನಾಲದ ಮರದ ಕೆಳಗೆ ಕುಳಿತು ಇಬ್ಬರೂ ಊಟಮಾಡುವಾಗ ಕೂಸು ಅಳುವ ಧ್ವನಿಯೊಂದಿಗೆ ಕೇಳಿಬಂದಿತು. ಆಲದ ಮರ ಮೇಲಕ್ಕೆ ನೋಡಲಾಗಿ ಆಲದ ಮರದಲ್ಲಿ ಬಂಗಾರದ ತೊಟ್ಟಿಲು ಹೊಳೆಯುತ್ತಿತ್ತು. ತೊಟ್ಟಿಲನ್ನು ಬಿಚ್ಚಿ ಕೆಳಗಿಳಿಸಬೇಕೆಂದು ನಿರ್ಧರಿಸಿದರು. ಯಾರು ಗಿಡ ಏರಬೇಕೆಂಬ ವಾದದಲ್ಲಿ ಹಿರಯಕ್ಕ ಅಕ್ಕವ್ವನೇ ಗಿಡಹತ್ತಿ ತೊಟ್ಟಿಲು ಇಳಿಸಬೇಕೆಂದು ಒಪ್ಪಂದವಾಯಿತು. ಆಕೆ ಗಿಡ ಹತ್ತಲು ಹೋದಾಗ ಬೊಡ್ಡೆಗೆ ಮುಕುರಿದ ಇರುವೆಗಳು ಆಕೆಗೆ ಹತ್ತಗೊಡಲಿಲ್ಲ. ಈಗ ಮಾಯವ್ವನ ಸರದಿ ಬಂದಿತು. ಆಕೆ ಸ್ನಾನ ಮಾಡಿ ಗಿಡ ಹತ್ತಬೇಕೆಂದಾಗ ಇರುವೆಗಳು ಒಪ್ಪಿಗೆಕೊಟ್ಟರೆ ದಾರಿ ಬಿಡುವುದಾಗಿ ಹೇಳಿದವು. ಮಾಯವ್ವ ಹಿಟ್ಟು ಹಾಕಲಾಗಿ ಅದನ್ನು ತಿಂದ ಇರುವೆಗಳು ಹುಚ್ಚು ಇರುವೆಗಳಾಗಿ ಅವುಗಳ ಬಾಯಿ ಮುಚ್ಚಿ ಹೋದವು. ಮಾಯವ್ವ ಗಿಡ ಹತ್ತಿದಳು. ತೊಟ್ಟಿಲಿನ ಸಮೀಪ ಹೋದಾಗ ಗಿಳಿಗಳು ಬಂದು ತಡೆದವು. ತಮ್ಮನವಾಡಿ ಸಲುವಿದ್ದೇನೆ; ಅವನು ನಮಗೇ ಇರಲಿ ಎಂಬ ವಾದ ಗಿಳಿಗಳದು. ಒಪ್ಪಿಗೆಕೊಟ್ಟರೆ ಬಿಡುತ್ತೇವೆ ಎಂಬ ಮಾತಿಗೆ ಮಾಯವ್ವ ತೊಟ್ಟಿಲಲ್ಲಾಡುವ ಮಕ್ಕಳಿಗೆ ಮೇಗಿಣಿಗಳಾಗುವ ಭಾಗ್ಯ ಕೊಡುತ್ತಾಳೆ. ಅಲ್ಲಿಂದ ತೊಟ್ಟಿಲ ಕಾಯುವ ನಾಗಪ್ಪ ಒಪ್ಪಿಗೆಬೇಡಲು, ನಿನ್ನ ರೂಪವನ್ನು ಬಾಗಿಲ ಮೇಲೆ ಹೊಸ್ತಿಲ ಮೇಲೆ ಬರೆಸುವೆ ಎನ್ನಲು ದಾರಿ ಬಿಡುತ್ತದೆ. ಈಗ ಮಾಯವ್ವ ತೊಟ್ಟಿಲ ಬಿಚ್ಚಿ ಕೆಳಗೆ ಬಿಡುತ್ತಾಳೆ. ಅಕ್ಕವ್ವ ಇಳಿಸಿಕೊಳ್ಳುತ್ತಾಳೆ. ಈಗ ಕೂಸು ಯಾರಿಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಕೂಸು ನನಗೆ – ತನಗೆ ಎಂದು ಹಾಕ್ಯಾಡುವಾಗ ಅಲ್ಲಿಗೆ ಎರಳಿಗುಂಪಿ ರಾಯಣ್ಣ ಬರುತ್ತಾನೆ. ನಾನು ಹೇಳಿದಂತೆ ನಡೆದುಕೊಂಡವರಿಗೆ ಕೂಸು ಒಪ್ಪಿಸುವುದಾಗಿ ಹೇಳುತ್ತಾನೆ. ಸ್ನಾನ ಮಾಡಿ ತೊಟ್ಟಿಲ ಸುತ್ತ ಹಾಕಿದಾಗ, ಯಾರ ಎದೆಗಳು ಚಿಗಿತು ಹಾಲು ಬರುವವೊ ಅವರಿಗೆ ಕೂಸು ಕೊಡುವುದಾಗಿ ಹೇಳುತ್ತಾನೆ.

ಮತ್ತೆ ಅಕ್ಕವ್ವನೇ ಮೊದಲ ಸಲ ಸ್ನಾನ ಮಾಡಿ ತೊಟ್ಟಿಲ ಸುತ್ತಿದರೆ, ಆಕೆಯ ಎದಿಬದಿಗಳು ಚಿಗಿಯಲಿಲ್ಲ. ಮಾಯವ್ವ ಹಾಗೆ ಮಾಡಲು, ಆಕೆಯ ಎದಿಬದಿಗಳು ಚಿಗಿತು ಮೊಲೆಯಲ್ಲಿ ಹಾಲು ಕಾಣಿಸಿಕೊಂಡವು. ಅವಳಿಗೆ ಬಾಣಂತಿಯ ಲಕ್ಷಣ ಬಂದಿತು. ಕೂಸು ಅವಳ ಪಾಲಿಗೇ ದೊರಕಿತು. ಈಗ ಮನೆಗೆ ಕೂಸನ್ನು ಒಯ್ದು 'ಮನಕೆ ಮಗನ ಮಾಡಿ, ಜನಕೆ ತಮ್ಮನ ಮಾಡಿ' ಕೂಸಿನ ಸಲುವತೊಡಗಿದಳು. ತೊಟ್ಟಿಲ ಕಾರ್ಯಕ್ರಮ ಮಾಡಿ, ಊರಹೆಣ್ಣು ಮಕ್ಕಳ ಕರಸಿ, ಬೀರಣ್ಣ ಎಂದು ಹೆಸರಿಟ್ಟು ಕರೆದಳು.

ಈಗ ಮುಂದೆ ಬೀರಪ್ಪ ಅಂಬೆಗಾಲಿಟ್ಟು ಹೆಜ್ಜೆಹಾಕಿದ. ಆಟ ಆಡುವಂತಾದ, ತಾಯಿಯಾಗಿ ಮಾಯವ್ವ ಬೀರಪ್ಪನಿಗೆ ಜೋಪಾನವಾಗಿ ಸಲುಹಿದಳು. ಮಗ್ಗುಲಲ್ಲಿ ತನ್ನ ಸೆರಗಿನ ಆಶ್ರಯದಲ್ಲಿ ಸಲುಹ ಹತ್ತಿದಳು. ಈಗ ಬೀರಪ್ಪನ ಮಾಯದಾಟಗಳು ಪ್ರಾರಂಭವಾದವು. ಅಕ್ಕಳಿಗೆ ನಿದ್ರೆ ಹತ್ತಿದಾಗ ಅವಳ ಮಗ್ಗುಲಿನಿಂದ ಎದ್ದು ಹೋಗಿ ಆಟ ಆಡಿ ಬರುತ್ತಿದ್ದನು. ಆಕೆ ಗುರುತು ಹಿಡಿದು ಅವನಿಗೆ ಸರ್ವವಿದ್ಯೆಯಲ್ಲಿ ಪಾರಂಗತನಾಗುವ ವ್ಯವಸ್ಥೆ ಮಾಡಿದಳು. ವ್ಯಾಯಾಮ ಶಾಲೆ ನಿರ್ಮಿಸಿದಳು. ತಮ್ಮನು ದಂಡು ಹಿಡಿದು ವ್ಯಾಯಾಮ ಮುಗಿಸಿ ಬಂದುದನ್ನು ಖುಷಿಯಿಂದ ಕಂಡು ತಂಬಿಗೆ ಹಾಲು ಕುಡಿಸಿದಳು. ಬೀರಪ್ಪನು ಚಂದನ ಗಿರಿಯಲ್ಲಿ ಅಕ್ಕನಿಗೆ ಚಿಣಿದಾಂಡ ಬೇಡಿ ಜಗಳ ತೆಗೆದನು. ಉಡಿಯಲ್ಲಿ ಹೊನ್ನುಕಟ್ಟಿಕೊಂಡು ಬಡಿಗೇರ ಮನಿಗೆ ಹೋದ ಮಾಯುವ್ವ ಮುತ್ತಿನ ಚಿಣಿದಾಂಡ ಮಾಡಿಸಿ ತಂದಳು.

ಇನ್ನೊಮ್ಮೆ ಚಂಡು ಲಗ್ಗಿ ಬೇಡಿ ಜಗಳ ತೆಗೆದನು. ಅದನ್ನು ಮಾಡಿಸಿಕೊಂಡು ಬಂದು ಬಿಟ್ಟಳು. ಇಲ್ಲಿ ಬೀರಪ್ಪ ಒಬ್ಬ ಚೆಟ್ಟಿ ಸಾಹುಕಾರನಿಗೆ ಚಂಡಾಟದಲ್ಲಿ ಚಂಡಿನಿಂದ ಹೊಡೆದ. ಇದರಿಂದ ಚೆಟ್ಟಿ ಸಾಹುಕಾರನ ಮಗ ತೀರಿಕೊಂಡ ಕಾರಣ, ಜನರಿಗೆ ಬೆದರಿ ಮಾಯವ್ವ ತಮ್ಮನೊಂದಿಗೆ ಚಂದನ ಗಿರಿ ಬಿಟ್ಟು ಬೆಳ್ಳಿಗಿರಿಗೆ ಹೋಗಿ ಇರಹತ್ತಿದಳು. ಈ ಊರಿನಲ್ಲಿ ಬೀರಪ್ಪ ಬಿಲ್ಲು-ಬಾಣ ಬೇಡಿ ಕಾಡಲು, ಅಕ್ಕಂದಿರರಿಂದ ಶಿವನಲ್ಲಿದ್ದ ರಾಮಬಾಣವನ್ನು ತರಿಸಿಕೊಟ್ಟಳು. ಈ ಬಾಣದಿಂದ ನೀರು ತರುವ ಬಾಲೆಯರನ್ನು ಬೀರಪ್ಪ ಕಾಡಲು, ಅವರು ಮನೆಗೆ ಬಂದು ಮಾಯವ್ವನೊಂದಿಗೆ ಬಾಯಾಡಿ, ನಿನ್ನ ತಮ್ಮನಿಗೆ ಬೇಕಾದರೆ ನಾರಿನ ತಂದುಕೋ ಎನ್ನುವರು.

ಆ ಹೆಣ್ಣುಮಗಳು "ತಾಯಿ ಇಲ್ಲದವನೇ ತಂದಿ ಇಲ್ಲದವನೇ" ಎಂದು ಬೈದುದರಿಂದ ಬೀರಪ್ಪನು ಅಕ್ಕನಲ್ಲಿಗೆ ಬಂದು ತನ್ನ ತಂದೆ-ತಾಯಿ ಯಾರು? ಎಂದು ಹಟಹಿಡಿಯುವನು. ನೀನು ಹೇಳಿದರೆ ನಾನು ಊಟ ಮಾಡುತ್ತೇನೆಂದು ಹಟ ಹಿಡಿಯುವನು. ಮಾಯವ್ವ 'ಕೂಡ ಬಾರದಕೂಡಿವೆ ಕೊದಲಿಗೆ ನಂದನ ಬನದಾಗ ಅಕ್ಕ ಒಬ್ಬರ ಮಗಳೇನ ತಮ್ಮ ಒಬ್ಬರ ಮಗನೇನ' ಎಂದು ಎಷ್ಟು ಹೇಳಿದರೂ ಆತ ಕೇಳಲಿಲ್ಲ. ಮಾಯವ್ವ ತಮ್ಮನಿಗಾಗಿ ಎರಳೆಗುಂಪಿ ರಾಯಣ್ಣನ ಮಗಳನ್ನು ನೋಡಿಬಂದಿದ್ದೇನೆ, ನೀನು ಮದುವೆ ಮಾಡಿಕೊಳ್ಳಬೇಕೆಂದು ಹೇಳುವಳು. ಆಗ ಆತ "ಪ್ರಪಂಚದಲ್ಲಿ ಎಲ್ಲ ಹೆಣ್ಣು ಮಕ್ಕಳು ನನಗೆ ನಿನ್ನಂತೆಯೇ ತೋರುತ್ತಾರೆ. ನನ್ನ ಸೋದರ ಸೊಸೆ ಒಬ್ಬಳನ್ನೆ

ಮದುವೆಯಾಗಬೇಕು. ನನಗೆ ಯಾರು ಇಲ್ಲವೇನು?" ಎಂದು ಹಟ ಮಾಡುವನು. ಮಾಯವ್ವ ಹೊರಳಿ ಮಗ್ಗಲು ಮಲಗಿದಾಗ ಹಾಗೇ ಕಣ್ಣು ಮುಚ್ಚಿದವು. ಕನಸಿನಲ್ಲಿ ಗುರು ರೇವಣಸಿದ್ಧ ಬಂದು ಮಾಯವ್ವ ಮತ್ತು ಬೀರಪ್ಪ ಇಬ್ಬರ ಪೂರ್ವಜರ ಪರಿಚಯ ಹೇಳಿ ಮಾಯವಾಗುವನು. ಬೆಜ್ಜರ ಹೊಡೆದು ಎದ್ದು ತಮ್ಮನಿಗೆ ಎಬ್ಬಿಸಿ, ಇಬ್ಬರ ಪೂರ್ವಜರ ಪರಿಚಯ ಹೇಳಿ, ನಿಮ್ಮ ತಾಯಿ ಸೂರಮ್ಮದೇವಿಗೆ ಅಣ್ಣನಾದ ಕಾಳೀನಾರಾಯಣನು ನಗರಿಪಟ್ಟಣದ ಅರಸನಾಗಿದ್ದು, ಅವನಿಗೊಬ್ಬಳು ಕನ್ನಿಕಾಮವ್ವಳೆಂಬ ಮಗಳಿರುವುದಾಗಿ ಹೇಳುವಳು.

ಬೀರಪ್ಪನು ಕನ್ನಿಕಾಮವ್ವನನ್ನು ಗೆದ್ದು ತಂದಾಗ – ಸಂಭ್ರಮದಿಂದ ಮನೆ ತುಂಬಿಸಿಕೊಳ್ಳುವಳು. ಮದುವೆಯ ನಂತರ ನಾಡ ಸಾಧುಣಿಗಾಗಿ ಬೀರಪ್ಪ ಜೊತೆಗೆ ಕರೆದುಕೊಂಡು ಹೋದುದು ಅಕ್ಕ ಮಾಯವ್ವನನ್ನೇ ಮುಂಗಿ ಪಟ್ಟಣ, ಕಾಯಿಕೊಂಕಣನಾಡು ಸಾಧುಣಿ ಮಾಡಿಕೊಂಡು ಚಿಂಚಲಸೂರ ವನದೇವತೆಯನ್ನು ಬೀರಪ್ಪ ಸಂಹಾರ ಮಾಡುವನು. ಆಗ ಮಾಯವ್ವ ಖಾಯಂ ಆಗಿ ಚಿಂಚಲಸೂರದಲ್ಲಿಯೇ ಉಳಿಯವಳು. ತಮ್ಮ ಬೀರಣ್ಣ ಮಾತ್ರ ತಿರುಗಿ ಬೆಳ್ಳಿಗಿರಿಗೆ ಬರುವನು. ಹೀಗೆ ಬರುವಾಗ ಮಾಯವ್ವ ತನ್ನ ಪಾಲಿಗೆ ಕೊಟ್ಟ ದಿಬರಾಯನ ಕುರಿಗಳನ್ನು ಬೀರಣ್ಣನಿಗೆ ಉಡುಗೊರೆಯಾಗಿ ಕೊಡುವಳು. ಆದರೆ ಬೀರಣ್ಣ ತನ್ನ ಗೆಳೆಯನಾದ ಬಪ್ಪಣ್ಣನಿಗೆ ಕರೆಸಿ, ಕುರಿಕಾಯಲು ಹಚ್ಚುವನು.

ಹನ್ನೆರಡು ವರ್ಷಗಳಾದರೂ ಕುರಿಗಳು ಮರಿ ಹಾಕಲಿಲ್ಲ. ಅದಕ್ಕಾಗಿ ಅಕ್ಕನ ಕರೆದುಕೊಂಡು ಬಂದು ಹಬ್ಬ ಮಾಡಬೇಕೆಂದು ಬೀರಣ್ಣ ಯೋಚಿಸುವನು. ಅಕ್ಕನನ್ನು ಕರೆದುಕೊಂಡು ಬರಲು ಗೆಳೆಯ ಬಪ್ಪಣ್ಣನನ್ನು ಕಳಿಸುವನು. ಬಪ್ಪಣ್ಣ ಮಾಯವ್ವನಿಗೆ ಕರೆಯಲು ಹೋಗುವಾಗ ಕಾಡಿಗೆ ಜೋಳದರೊಟ್ಟಿ ಹುಣಸೇಕಾಯಿ ಖಾರಹಚ್ಚಿ ಬೀರಪ್ಪನ ಹೆಂಡತಿ ಬುತ್ತಿಕಟ್ಟುವಳು. ಬಪ್ಪಣ್ಣ ಮಾಯವ್ವನಲ್ಲಿಗೆ ಬಂದು, ಕರೆಯಲು ಬಂದಿರುವುದಾಗಿ ಹೇಳಿದನು. ತಮ್ಮನು ಕಳಿಸಿದ ಬುತ್ತಿಯನ್ನು ಮಾಯವ್ವ ತೆರೆದು ನೋಡಿ, ಮನನೊಂದುಕೊಂಡಳು. ಹೆರವರ ತಮ್ಮ ಪರವರ ಕರೆಯಲು ಕಳಿಸಿದನೆಂದೂ, ತಮ್ಮನ ಮನೆಯಲ್ಲಿ ಅಕ್ಕಿ ಇರಲಿಲ್ಲವೇನ, ಗೋಧಿ ಇರಲಿಲ್ಲವೇನ ಎಂದು ಮರಗಿಕೊಳ್ಳುವಳು. ತಾನು ಸಂತೆಗೆ ಹೋಗಿ ಗೋಧಿ, ಅಕ್ಕಿ ತಂದು ಹಲವಾರು, ನಮೂನೆಯ ಅಡಿಗೆಯನ್ನು ತಯಾರಿಸಿ ಬುತ್ತಿಕಟ್ಟಿ ಬಪ್ಪಣ್ಣನಿಗೆ ಕೊಟ್ಟು, ನಾನು ನನ್ನ ತಮ್ಮನಿಗೆ ಒಳ್ಳೆಯದಾಗಲೆಂದು ಹರಕೆಹೊತ್ತು ಮನೆಯಲ್ಲಿಯೇ ಹಬ್ಬ ಮಾಡುತ್ತೇನೆ ಎಂದು ಹೇಳಿದಳು. ಬಪ್ಪಣ್ಣ ಮಾಯವ್ವ ಕಟ್ಟಿದ ಬುತ್ತಿ ಹೊತ್ತು ಒಬ್ಬನೇ ಬಂದು ಅಕ್ಕ ಆಡಿದ ಮಾತನ್ನು ಹೇಳುವನು.

ಅಕ್ಕನ ನಕಾರಾತ್ಮಕ ಭಾವನೆಗೆ ತಮ್ಮ ಬೀರಪ್ಪ ಕ್ರೋಧಗೊಳ್ಳುವನು. ನಾನೇ ಕರೆಯಲು ಹೋಗುತ್ತೇನೆಂದು ತಾನು ತೇಜಿಯ ಮೇಲೆ ಕುಳಿತು ಅಕ್ಕನಿಗಾಗಿ ನಂದಿಯನ್ನು ಮುಂದೆ ಮಾಡಿಕೊಂಡು ಹೊರಡುವನು. ಮನೆಗೆ ಬಂದ ತಮ್ಮನನ್ನು ಅಕ್ಕ ಮರ್ಯಾದೆಯಿಂದಲೇ ಸ್ವಾಗತಿಸಿದಳು. ಕೂಡ್ರಲು ಚೌಕಿಮಣೆ ಹಾಕಿದಳು. ಆದರೆ ಬೀರಪ್ಪ 'ನಾನು ಕರೆಯಲು ಬಂದಿಲ್ಲ, ನಿನ್ನ ಕಾಡಲು ಬಂದಿದ್ದೇನೆ' ಎಂದು ಹೇಳುವನು. ನಾನು ಕೆಳಗೆ ಕುಳಿತುಕೊಳ್ಳುವುದಿಲ್ಲ ನನಗೆ ಕೂಡ್ರಲು ನಾಗರಗದ್ದುಗೆ ಬೇಕೆಂದನು. ಅಕ್ಕ ಹುತ್ತಿನ ಹತ್ತಿರ ಹೋಗಿ ಬೇಡಿಕೊಳ್ಳಲು, ಕೊದಲಿಗೆ ನಂದನವನದ ಕಾಂಚಿನಾಲದ ಮರದಲ್ಲಿ

ಕಟ್ಟಿದ್ದ ಕೂಸು ಬೀರಪ್ಪನ ತೊಟ್ಟಿಲನ್ನು ಕಾಯುತ್ತಿದ್ದ ನಾಗಪ್ಪ ಬಂದನು. ಮಾಯವ್ವನ ಮನೆಯಲ್ಲಿ ಸುರುಳಿ ಹೊಡೆದು ಮೇಲೆ ಹೆಡೆ ತೆರೆದು ಕುಳಿತನು. ಬೀರಪ್ಪ ನಾಗರಗದ್ದುಗೆಯ ಮೇಲೆ ಕುಳಿತನು. ಜಳಕ ಮಾಡಲು ಏಳೆಂದರೆ 'ಕಪ್ಪೆ, ಮೀನು ಮುಟ್ಟದ ಎಂಜಲು ನೀರು ಒಲ್ಲದೆ, ತನಗೆ ಗಂಗಿ ನೀರು ಬೇಕೆ'ಂದನು. ಮಾಯವ್ವ ಗಂಗಮ್ಮನಿಗೆ ಪೂಜಿಸಲು ಗಂಗಿ ಹರಿದುಬಂದು ಬಿಂದಿಗಿ ತುಂಬಿದಳು. ತಮ್ಮನು ಸ್ನಾನ ಮಾಡಿದನು. ಊಟಕ್ಕೆ ಮೀಸಲು ಹಾಲು ಬೇಡಿದನು. ಕಾಮಧೇನುವಿಗೆ ಧ್ಯಾನಿಸಿ ಮೀಸಲು ಹಾಲು ಪಡೆಯುವಳು. ಈಗ ಬೀರಪ್ಪನು 'ನಿನ್ನನ್ನು ಕಾಡಲು ಬಂದಿಲ್ಲ ಕರೆಯಲು ಬಂದಿದ್ದೇನೆ' ಎಂದು ಹೇಳುವನು.

ಬೀರಪ್ಪನು ಕರೆಯಲು, ತಮ್ಮನಿಗಾಗಿ ಅವನ ಮನೆಗೆ ಬರುತ್ತಾಳೆ. ಸೀರೆ ಚಂದಿಲ್ಲವೆಂದು ಮುನಿಯುತ್ತಾಳೆ. ಬೀರಪ್ಪ ಸಂತೆಗೆ ಕರೆದುಕೊಂಡು ಹೋದರೂ ಯಾವ ಸೀರೆಯೂ ಬೇಡ ಎನ್ನುತ್ತಾಳೆ. ಹಬ್ಬ ಮುಗಿಸುತ್ತಾಳೆ. ಪುನಃ ಬಪ್ಪಣ್ಣ ಬಂದು ಚಿಂಚಲಿಸೂರಿಗೆ ಕಳಿಸಿ ಹೋಗುತ್ತಾನೆ.

**ಹಾಲಹಳ್ಳವೆಂದು ಹೆಸರು ಬಂದದ್ದು :**

ಚಿಂಚಲಿ ಮತ್ತು ಬಿರಡಿಯ ನಡುವೆ ಒಂದು ಹಳ್ಳ ಇದೆ. ಅದಕ್ಕೆ ಹಾಲಹಳ್ಳವೆಂದು ಹೆಸರು. ಅದಕ್ಕೂ ಒಂದು ಕಥೆಯಿದೆ. ಮಾಯಮ್ಮ ಕಾರಹುಣ್ಣಿಮೆಯ ದಿನದಂದು ಗೆಳತಿಯರೊಂದಿಗೆ ಹಳ್ಳಕ್ಕೆ ಹೋಗಿ ಮಳಲ (ಉಸುಕಿನ ಆಟ) ಆಟವಾಡುತ್ತಿದ್ದಳು. ಅಲ್ಲಿಯಿಂದ ಹಳ್ಳದ ದಡದಲ್ಲಿರುವ ಉಣ್ಣಿಮಂಟಪದಲ್ಲಿ ಹಾಲು ಉಕ್ಕಿಸುವ ಕಾರ್ಯವನ್ನು ಮಾಡುತ್ತಿದ್ದಳು. ಹಾಲು ಉಕ್ಕಿದ ಕಡೆ, ಸುಖಾಲ, ಮತ್ತೊಂದು ಕಡೆ ಬರಗಾಲ ಆಗುವುದೆಂದು ತಿಳಿಯುವುದು ಈಗಲು ವಾಡಿಕೆ. ಮಾಯವ್ವ ಲಿಂಗ ಬೀರಣ್ಣನನ್ನು ಜೋಪಾನ ಮಾಡುತ್ತಿದ್ದಳು ಚಿಂಚಲಿಯಲ್ಲಿ ಬೀರಣ್ಣನನ್ನು ಬಿಟ್ಟು –ಹಳ್ಳಕ್ಕೆ ಬಂದಿದ್ದಳು. ಮಗನ ನೆನಪಾಗಿ ಹಳ್ಳದ ದಂಡಿಗೆ ಬಂದಳು. ಅಲ್ಲಿ ಕುರುಬರು ದಡ್ಡಿ ಹಾಕಿದ್ದರು. ಮಾಯವ್ವ ಮಗನ ನೆನಪಾಗಿ ಹಾಲು ಕೇಳಿದಳು. ಆಗ ಅವರು ಕೊಡಲಿಲ್ಲ. ಮನಸ್ತಾಪ ಮಾಡಿಕೊಂಡು, "ಹಾಲು ಹರಿದು ಹಳ್ಳ ಆಗಲಿ"; ನಿನ್ನ ಕುರಿಗಳು ಕಲ್ಲಾಗಲಿ ಎಂದಳು, ಈಗಲಾದರು ಅದಕ್ಕೆ ಹಾಲುಹಳ್ಳವೆಂದು ಕರೆಯುತ್ತಾರೆ. ಹಳ್ಳದಲ್ಲಿರುವ ಕಲ್ಲುಗಳು ಕುರಿಗಳನ್ನು ಹೋಲುತ್ತವೆ. ಎಲ್ಲಾ ನದಿಗಳು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತವೆ. ಆದರೆ ಹಾಲಹಳ್ಳ ಪೂರ್ವದಿಂದ ಪಶ್ಚಿಮಕ್ಕೆ ಹರಿಯುತ್ತದೆ. ಈಲ್ಲಿ ಜಳಕ ಮಾಡಿದರೆ, ಪಾಪ ಪರಿಹಾರ ರೋಗ–ಗುಣವಾಸಿಯಗುವುದೆಂದು ಈ ಜನರ ನಂಬಿಕೆ.

**ಮಾಯಕ್ಕನ ಮುಖ ಪಶ್ಚಿಮಕ್ಕಿದೆ.**

ಚಿಂಚಲಿಯ ಮಾಯವ್ವ ಲಿಂಗ ಬೀರಣ್ಣನನ್ನು ಮನಕ್ಕೆ ತಮ್ಮನ ಮಾಡಿ ಜನಕ್ಕೆ ಮಗನ ಮಾಡಿ ಸಾಕಿ ಸಲುಹುತ್ತಿದ್ದಳು. ಮಗದೊಡ್ಡವನಾದ ಮೇಲೆ ಹೆಣ್ಣೊಂದು ತಗೆಯಬೇಕೆಂದು ನಿಶ್ಚಯಿಸಿದಳು. ಆದರೆ ಬೀರಣ್ಣ, ಮಾವ ನಾರಾಯಣನ ಮಗಳಾದ ಕನ್ನಿಕಾ ಮಾಲಿಯನ್ನು ಮಾಡಿಕೊಳ್ಳುವುದು ಕೊಡದಿದ್ದರೆ ಹೊತ್ತು ತರುವುದೆಂದು ನಿರ್ಧಾರ ಮಾಡಿದನು. ಆದರೂ ಮಾಯಮ್ಮ–ಗುಲ್ಬರ್ಗಾ ಜಿಲ್ಲಾ

ಅಪ್ಪರುಖುಲ್‌ಮೂರ ತಾಲೂಕ ಯರಳಿಗುಂಪಿ ರಾಯಣ್ಣನ ಮಗಳನ್ನು ಬೀರಣ್ಣನಿಗೆ ಹೆಣ್ಣು ತೆಗೆದಿರುತ್ತಾಳೆ. ಇದು ಬೀರಣ್ಣನಿಗೆ ಗೊತ್ತಾಗುವುದು, ಆಗ ಅವನು ನುಡಿಯುವುದು ಜಗತ್ತಿನಲ್ಲಿರುವ ಎಲ್ಲಾ ಹೆಣ್ಣು ಮಕ್ಕಳು ನನ್ನ ಅಕ್ಕ ತಂಗಿಯರ ಸಮಾನವೆಂದನು. ಆಗ ಮಾಯಕ್ಕ ಬೀರಣ್ಣನ ನಡುವೆ ಮನಸ್ತಾಪ ಉಂಟಾಗಿ ಮಾಯಕ್ಕ ಚಿಂಚಲಿಗೆ ಬಂದು ದೈತ್ಯರ ಸಂಹಾರಮಾಡಿ ತಮ್ಮನನ್ನು ನೋಡದೆ ಪಶ್ಚಿಮಕ್ಕೆ ಮುಖ ಮಾಡಿ ನೆನೆಯುತ್ತಾಳೆ. ಮುಂದೆ ಬೀರಣ್ಣ ಅಕ್ಕಮಾಯವ್ವ ನೋಡದೆ ಇದ್ದಕಾರಣ ಪೂರ್ವಕ್ಕೆ ಮುಖಮಾಡಿ ಆಲಕನೂರ, ಕೊಣ್ಣುರ, ಘೋಡಗೇರಿ, ಸಿರಡೋಣದಲ್ಲಿ ವಾಸಮಾಡುವನು.

**ಜಾತ್ರೆ ಉತ್ಸವ :**

ಚಿಂಚಲಿಯ ಮಾಯಕ್ಕನ ಜಾತ್ರೆಯು ಪ್ರತಿವರ್ಷ ಫೆಬ್ರುವರಿ ತಿಂಗಳಿನಲ್ಲಿ ಭಾರತ ಹುಣ್ಣಿಮೆಯೆಂದು ಜರುಗುವುದು. ಹಸ್ತಾನಕ್ಷತ್ರಕ್ಕೆ ದೇವಿಯ ಪಲ್ಲಕ್ಕಿ ಉತ್ಸವ ಹಾಗೂ ನೈವೇದ್ಯ ಕಾರ್ಯಕ್ರಮ. ಸದರಿ ಜಾತ್ರೆ ಭಾರತ ಹುಣ್ಣಿಮೆಯಿಂದ ಒಂದು ತಿಂಗಳ ಪರ್ಯಂತರ ನಡೆಯುವುದು. ಇದು ಬೆಳಗಾವಿ ಜಿಲ್ಲೆಯಲ್ಲಿಯೇ ಅತ್ಯಂತ ದೊಡ್ಡ ಜಾತ್ರೆ ಲಕ್ಷಕ್ಕೂ ಅಧಿಕ ಜನ ಸೇರುವರು. ಎಂದರೆ ಜಾತ್ರೆಗೆ ದೇಶದ ಎಲ್ಲಾ ರಾಜ್ಯದಿಂದ ಭಕ್ತರು ಆಗಮಿಸುತ್ತಾರೆ. ಹೆಚ್ಚಾಗಿ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶದ ಎಲ್ಲ ಭಕ್ತಾದಿಗಳು ಜಾತ್ರೆಯಲ್ಲಿ ಭಾಗವಹಿಸುತ್ತಾರೆ.

ದಿನಾಲು ಎರಡು ಹೊತ್ತು ಪೂಜೆ ನಡೆಯುವುದು. ಇಲ್ಲಿಯ ವಿಶೇಷವೆಂದರೆ ಪೂಜಾರಿಗಳು ಎರಡು ಜಾತಿಯವರು ಪೂಜೆ ಮಾಡುವರು.

೧) **ಕುರುಬರು ಮತ್ತು**

೨) **ಲಿಂಗಾಯತರು** ಇಬ್ಬರೂ ಪೂಜೆ ಮಾಡುವಾಗ ಹೆಗಲ ಮೇಲೆ ಕಂಬಳಿ (ಜಾಡಿ)ಯನ್ನು ಹಾಕಿಕೊಂಡು ದೇವಿಗೆ ಪೂಜೆ ಮಾಡುವರು. ಇಲ್ಲಿ ದನಗಳ ಜಾತ್ರೆಯ ವಿಶೇಷವೆಂದರೆ ಮೊದಲು ಕತ್ತೆಗಳ ಮಾರಾಟವಾದ ನಂತರ ದನಗಳ ಜಾತ್ರೆ ಪ್ರಾರಂಭವಾಗುವುದು.

ಮಹಾರಾಷ್ಟ್ರದಿಂದ ಬಂದ ಜನ ತಮ್ಮದೇ ಆದ ಘೋಷಣೆಯನ್ನು ಕೂಗುವರು. ಆದಾವುದೆಂದರೆ

**'ಮಾಯಾಕಾಚಾ ನಾವನಾ**

**ಚಾಂಗಬಲೋ / ಚಾಂಗಬಲೇ'** ಎಂದು

ಹೇಳುತ್ತಾ ಮಾಯಕ್ಕನಿಗೆ ನೈವೇದ್ಯ ಅರ್ಪಿಸುವರು.

**ಕೀಲ–ಕಟ್ಟೆ :**

ಚಿಂಚಲಿಯ ಗ್ರಾಮದಲ್ಲಿ ಕೀಲ–ಕೀಟ ಎಂಬ ದೈತ್ಯ ರಾಕ್ಷಸರಿದ್ದರು. ಅವರು ಅಲ್ಲಿಯ ಜನರಿಗೆ ಭಯಂಕರ ತೊಂದರೆಯನ್ನು ಕೊಡುತ್ತಿದ್ದರು. ಇದನ್ನು ತಾಳಲಾದರೆ ಬ್ರಹ್ಮ ಮತ್ತು ಶಿವನಲ್ಲಿ ಮೊರೆ ಹೋಗುತ್ತಾರೆ. ಆಗ ಶಿವ ವಿಷ್ಣುವನ್ನು ಕರೆದು ನೀನು ಮಾಯಮ್ಮ ಎನ್ನುವ ದೇವಿಯಲ್ಲಿ ಅವತಾರ ತೊಟ್ಟು ರಾಕ್ಷಸರನ್ನು ಸಂಹಾರ ಮಾಡು ಎಂದು ಆಜ್ಞೆ ಮಾಡಿದನು. ಆ ಆಜ್ಞೆಯಂತೆ ವಿಷ್ಣುವು ಮಾಯಮ್ಮನಲ್ಲಿ ಬಂದು ಮಾಯಮ್ಮ ಅರ್ಧಗಂಡು ಮತ್ತು ಅರ್ಧಹೆಣ್ಣು ರೂಪವನ್ನು ಧರಿಸುತ್ತಾಳೆ. ಆದ್ದರಿಂದ ಮಾಯಕ್ಕನಿಗೆ ಮೀಸೆ ಇವೆ ಎಂದು ತಿಳಿದುಬರುವುದು. ಈ ರೀತಿಯಾಗಿ ವಿಷ್ಣುವಿನ ಅವತಾರವನ್ನು ಧರಿಸಿ ರಾಕ್ಷಸರನ್ನು ಸಂಹರಿಸುತ್ತಾಳೆ. ಕೀಲ ಮತ್ತು ಕೀಟ ಎನ್ನುವ ರಾಕ್ಷಸರು ಸತ್ತ ಸ್ಥಳಕ್ಕೆ ಕೀಲಕಟ್ಟೆ ಎನ್ನುವರು.

ಮೂರು ವರ್ಷಕ್ಕೆ ಕೀಲಕಟ್ಟೆ ಜಾತ್ರೆಯೂ ಕೂಡ ನಡೆಯುತ್ತದೆ. ಜಾತ್ರೆಯಲ್ಲಿ ರಾಕ್ಷಸರಿಗೆ ನೈವೇದ್ಯವನ್ನು ಹಿಡಿದು ಅಲ್ಲಿರುವ ಹರವಿಯಲ್ಲಿ ಎಲ್ಲ ತರದ ಕಾಳು ಕಡಿಗಳನ್ನು ಹೋಳಿಗೆ ಅದರಲ್ಲಿ ಹಾಕುವುರು. ಹುಗಿದಿದ್ದ ಆಹಾರ ಪದಾರ್ಥಗಳನ್ನು ಮೂರು ವರ್ಷ ಆದ ನಂತರ ಅದನ್ನು ಹೊರಗೆ ತೆಗೆಯುತ್ತಾರೆ. ತೆಗೆದಾಗ ಅದರಲ್ಲಿ ಹಾವು, ಚೇಳು, ಕಪ್ಪೆ ಮಳೆ ಹುಳ ಕ್ರೀಮೀಕೀಟಗಳು ತಯಾರಾಗಿದ್ದರೆ ಸುಖಾಲ (ಮಳೆಗಾಲ) ಕ್ರೀಮಿಕೀಟಗಳು ತಯಾರಾಗದಿದ್ದರೆ. ಬರಗಾಲ ಬೀಳುವುದು ಎಂಬ ನಂಬಿಕೆ ಇದೆ. ಒಟ್ಟಾರೆ ಕೀಲಕಟ್ಟೆಯು ಭವಿಷ್ಯವನ್ನು ಸೂಚಿಸುವ ಸಂಕೇತವಾಗಿದೆ.

ಮಾಯಕ್ಕ ದೈತ್ಯರನ್ನು ಸಂಹಾರ ಮಾಡುವಾಗ ಬಿಳಿವರ್ಣದ ಕುದುರೆಯನ್ನು (ಕಾಥೇವಾಡ) ಹತ್ತಿಕೊಂಡು ಕಾರಹುಣ್ಣಿಮೆಯಲ್ಲಿ ಚಿಂಚಲಿಯ ಸುತ್ತಮುತ್ತ ದೈತ್ಯರನ್ನು ಓಡಾಡಿಸಿ ಹನ್ನೊಂದು ದಿನಗಳವರೆಗೆ ಉಗ್ರಹೋರಾಟ ಮಾಡಿ ಕೀಲ–ಕೀಟ ಎಂಬ ದೈತ್ಯರನ್ನು ಸಂಹಾರ ಮಾಡಿದ್ದಾಳೆ. ಆಗ ಇಡೀ ಆ ಕ್ಷೇತ್ರದ ಸುತ್ತೆಲ್ಲ ರಕ್ತದ ಪ್ರದೇಶವೇ ಕಂಡುಬರುತ್ತದೆ. ಈ ಕಾರಣಗಳಿಂದಾಗಿ ಈಗಲೂ ಸಹ ಪ್ರತಿವರ್ಷ ಕಾರಹುಣ್ಣಿಮೆಯಲ್ಲಿ ಮಾಯಕ್ಕ ೧೧ ದಿನಗಳವರೆಗೂ ಅವಳು ತಿರುಗಾಡಿದ ಸ್ಥಳಗಳಲ್ಲೆಲ್ಲಾ ಈಗಲೂ ತಿರುಗಾಡುತ್ತಾಳೆ ಎಂಬ ಜನರ ನಂಬಿಕೆ ಇದೆ. ಆ ವೇಳೆಯಲ್ಲಿ ಗುಲಾಲ ತೂರುವ ಸಂಪ್ರದಾಯ ಈಗಲೂ ಮುಂದುವರೆದಿದೆ.

ಮಾಯಕ್ಕ ಹತ್ತಿ ತಿರುಗಾಡಿದ ಕುದುರೆಯ ಸಂಕೇತವಾಗಿ ಇಂದಿಗೂ ಸಹ ಕಾಥೇವಾಡದ ಜಾತಿಯ ಕುದುರೆಗಳು ಮಾಯಕ್ಕನ ದೇವಸ್ಥಾನದಲ್ಲಿ ಉಳಿದುಕೊಂಡು ಬಂದಿವೆ. ಅವು ಈಗ ಜೀವಂತ ದೇವಿರೂಪಗಳೆಂದು ಪೂಜಿಸಲಾಗುತ್ತಿದೆ.

ಮಾಯಕ್ಕ ತಾಯಿಯ ಈಗಲಾದರೂ ನಿಜಭಕ್ತರಿಗೆ ತೋರುತ್ತಾಳೆ. ಅವಳ ಪೂಜಾರಿಗಳು ಪೂಜೆ ಮಾಡಿದ ನಂತರ ದೇವಿಯ ಕೈಕಾಲು, ಬೆನ್ನು ಭುಜಗಳನ್ನು ಭಕ್ತಿ ಭಾವದಿಂದ ಒತ್ತುತ್ತಾರೆ.

ನಂತರ ದೇವಿಗೆ ಮಲಗಲು ಕಂಬಳಿಯ ಹಾಸಿಗೆಯನ್ನು ಮಾಡಿ ತುಪ್ಪದ ದೀಪ ಇಟ್ಟು ಬೆನ್ನು ತೋರಿಸದೇ ಬಾಗಿಲು ಮುಚ್ಚಿ ದೇವಿ ಆಜ್ಞೆಯಂತೆ ಹೊರಬರುತ್ತಾರೆ. ಬೆಳಿಗ್ಗೆ ದೇವಿಯನ್ನು ಎಬ್ಬಿಸುವ ಸಂಪ್ರದಾಯವೂ ಸಹ ಇದೆ. ದೇವಿಯ ಪೂಜೆ ಮಾಡುವ ಪೂಜಾರಿಗಳು ಬಳ್ಳೊಳ್ಳಿ, ಈರುಳ್ಳಿ ತಿನ್ನುವಂತಿಲ್ಲ.

**೨.೧.೨ ಬೆಕ್ಕೇರಿ ಲಕ್ಷ್ಮೀದೇವಿ :**

ಹಿಂದೊಮ್ಮೆ ಪಾರ್ವತಿ ಪರಮೇಶ್ವರರು ಭೂಲೋಕಕ್ಕೆ ಆಗಮಿಸಿ ಹಾಲಹೇವಲಿ ಹಳ್ಳದ ದಡಕ್ಕೆ ಬಂದಿಳಿದರು. ಅಲ್ಲೊಂದು ವಿಶಾಲವಾದ ವಟವೃಕ್ಷವನ್ನು ಕಂಡು ಸಂತೋಷಭರಿತರಾಗಿ ವಿಶ್ರಾಂತಿ ಪಡೆದರು. ಹೋಗುವಾಗ ಈ ವಟವೃಕ್ಷದ ಕೆಳಗಡೆ ಸುರ ಕನ್ಯೆಯರು ಬಂದು ಕುಳಿತರೆ ಗರ್ಭಿಣಿಯಾಗಲಿಯೆಂದು ವರವಿತ್ತು ಹೋದರು. ಮುಂದೊಮ್ಮೆ ಸುರ ಕನ್ಯೆಯರು (೫ ಜನ) ವಿಹಾರಾರ್ಥವಾಗಿ ಸಂಚರಿಸುತ್ತ ಭೂಲೋಕಕ್ಕೆ ಬಂದಿದ್ದರು. ವಿಶ್ರಾಂತಿಗಾಗಿ ಗಿಡದ ಕೆಳಗಡೆ ಕುಳಿತರು. ಐದು ಜನ ಗರ್ಭಧರಿಸಿದರು. ಆ ಸುರ ಕನ್ಯೆಯರಿಗೆ ಚಿಂತೆ ಪ್ರಾರಂಭವಾಯಿತು. ನಮ್ಮ ಪತಿಗಳಿಗೆ ಗೊತ್ತಾದರೆ ನಾವು ಕೆಟ್ಟೆವುವೆಂದು ವಿಚಾರಿಸಿ, ತಮ್ಮ ಗರ್ಭವನ್ನು ತಾವೇ ವಿಸರ್ಜಿಸಿದರು. ಐದು ಹೆಣ್ಣು ಮಗುವಾಗಿದ್ದವು. ಅವುಗಳನ್ನು ತೆಪ್ಪದ ಮೇಲೆ ಸುರಕ್ಷಿತವಾಗಿರಿಸಿ ನದಿಯಲ್ಲಿ ತೇಲಿಬಿಟ್ಟರು. ಚಾಮರಾಯ ಎಂಬೋರ್ವನು ಕುರಿಗಳನ್ನು ಕಾಯುತ್ತಲ್ಲಿದ್ದನು. ಅವನಿಗೆ ಸಂತಾನವಿರಲಿಲ್ಲ. ತೇಲುತ್ತಾ ಬರುವ ತೆಪ್ಪದಲ್ಲಿ ಶಿಶುಗಳನ್ನು ನೋಡಿ ಆನಂದದಿಂದ ಅವುಗಳನ್ನು ಪಡೆದುಕೊಂಡು ಪ್ರೀತಿಯಿಂದ ಹೆಂಡತಿ ಶಾಂಭವಿಗೆ ಕೊಟ್ಟನು. ಅವಳು ಮಕ್ಕಳನ್ನು ಜೋಪಾನ ಮಾಡಿ, ೧೩ ದಿನಕ್ಕೆ ಐದು ಮಕ್ಕಳಿಗೂ ಜೋಗುಳ ಹಾಡಿ ಮುತ್ತೈದೆರೊಂದಿಗೆ ಹೆಸರಿಟ್ಟಳು.

೧) ಲಕ್ಷ್ಮಮ್ಮ (ಲಕ್ಕಮ್ಮ) ೨) ಮಾಯಮ್ಮ ೩) ಮಹಾಕಾಳಮ್ಮ
೪) ಮಂಕಮ್ಮ ೫) ಅಕ್ಕಮ್ಮ ಎಂದು ಹೆಸರಿಟ್ಟರು.

ಐವರಲ್ಲಿ ಮೊದಲನೆದವಳೇ ಲಕ್ಷಮ್ಮ ಇವಳೆ ಬೆಕ್ಕೇರಿ ಲಕ್ಕಮ್ಮವೆಂದು, ಅಲ್ಲಿಯ ಹಿರಿಯರು ಹೇಳುತ್ತಾರೆ. ಮುಂದೆ ಮಾಯಮ್ಮ, ಲಕ್ಷಮ್ಮ ಕುರಿಕಾಯುತ್ತ ಇಲ್ಲಿಯೇ ಉಳಿಯುವರು, ಉಳಿದ ೩ ಜನರು ಕೈಲಾಸಕ್ಕೆ ತೆರಳುವರು. ಮಾಯಮ್ಮ ಚಿಂಚಲಿಯಲ್ಲಿ ಉಳಿಯುವಳು.

**ಜಾತ್ರೆಯ ವಿಶೇಷ :**

ಜಾತ್ರೆಯು ವರ್ಷದಲ್ಲಿ ಎರಡು ಬಾರಿ ನಡೆಯುತ್ತದೆ.

೧) ಅಕ್ಷಯತೃತೀಯಾ ೨) ನವರಾತ್ರಿ

ದಸರಾಕ್ಕೆ ಬನ್ನಿ ಮುಡಿಯುವ ಸಲುವಾಗಿ ಮೂರರ ಸೀಮೆಗೆ ಪಾಲಕಿಯು ಹೋಗುವುದು. ಅಲ್ಲಿಂದ ಬಂದ ನಂತರವೇ ಬನ್ನಿ ಮುಡಿಯುವರು. (ಬೊಮ್ಮನಾಳ, ರಾಯಬಾಗ ಸ್ಟೇಷನ್, ಬೆಕ್ಕೇರಿ) ಹೋಗುವಾಗ ಅಮೋಘಸಿದ್ಧನ ಗುಡಿಯಲ್ಲಿ ಪಾಲಕಿಯ ಕುಳಿತು ಸಾಗುವುದು. ಮರಳಿ ಬಂದ ನಂತರ ಗೌಡರ ಮನೆತನದವರು ಬನ್ನಿ ಮುಡಿಯುವರು ಬನ್ನಿ ಮುಡಿಯುವರಿಗೆ ಅಲಗ-ಹಿಡಿಯುವರು. ದಸರಾ ಜಾತ್ರೆಗೆ ನೈವೇದ್ಯವನ್ನು ವಸಂತರಾವ ಪಾಟೀಲ (ಗೌಡರ) ಮನೆತನದವರು ಮೊದಲನೇ ನೈವೇದ್ಯ ಹಿಡಿಯುವುದು ವಾಡಿಕೆಯಾಗಿದೆ. ಮಾಯಮ್ಮನ ಜಾತ್ರೆ-ಹಸ್ತಾಮೂಹೂರ್ತಕ್ಕೆ ನಡೆಯುವುದು. ಮೂರು ದಿನ ಮೊದಲು ಬೆಕ್ಕೇರಿ ಜಾತ್ರೆ ನಡೆಯುವುದು. ೩ ದಿನದಲ್ಲಿ ೬ ಬಾರಿ ಪಾಲಕಿ ಏಳುವುದು. ಮೊದಲನೇ ದಿನ - ಡಾಂಗೆಯವರ ತೋಟಕ್ಕೆ ಹೋಗುವುದು. ೬ ಬಾರಿ ಗುಡಿಯ ಸುತ್ತಲೂ ತಿರುಗುವುದು. ಪಾಲಕಿಯ ಸೇವೆಗೆ ತಪ್ಪದೆ ಗೌಡರ ಮನೆತನದವರು ಬಂದು ಸೇವೆ ಸಲ್ಲಿಸುತ್ತಾರೆ. ಜಾತ್ರೆಗೆ ಹಿಡಕಲ್ ಗ್ರಾಮದ ಘಂಟೆ ಮತ್ತು ಪಾಟೀಲ ಮನೆತನದವರು ಸಂಜೆಯ ನೈವೇದ್ಯ ಮಾಡುವರು. ಪಾಲಕಿಯೊಂದಿಗೆ ದೇವರ ಕೋತವಾಲ್ (ಕುದುರೆ) ಹೋಗುವುದು. ಶುಕ್ರವಾರ, ಮಂಗಳವಾರ ಬಿಟ್ಟು ಉಳಿದ ದಿನ ಅಡಕಿಯ ಮುಖಾಂತರ ಕೌಲ ಕಟ್ಟುವರು. ಉಳಿದ ದಿನ ಕೌಲ ಕಟ್ಟುವುದಿಲ್ಲ. ಎರಡು ವೇಳೆ ಪೂಜೆ ಸಲ್ಲುವುದು, ಸಸ್ಯಹಾರವೇ ನೈವೇದ್ಯ.

ಈ ಜಾತ್ರೆ ಮುಗಿಸಿಕೊಂಡು ಚಿಂಚಲಿಗೆ ಹೋಗುವರು. ಹೋಗುವಾಗ, ನಡುವೆ ಹಾಲಹಳ್ಳವಿರುವುದು. ಅಲ್ಲಿ ಭಕ್ತರು ಹುಟ್ಟುಗೆ(ಹೊಸ ಅರಿವೆ) ಉಡುವರು. "ಆಗ ಒಂದು ಘೋಷಣೆ ಕೂಗುವರು. ಹಾಲಾಳ ಮಾಯವ್ವ ಬೇಕ್ಕೇರಿ ಲಕ್ಕವ್ವ ಚಾಂಗಬಲೋ ಎನ್ನುವರು." ಇದು ಮಾಯಮ್ಮ ಬೆಕ್ಕೇರಿ ಲಕ್ಕಮ್ಮ ಸಂಬಂಧ ಸೂಚಿಸುತ್ತದೆ.

## ೨.೨ ಪುರುಷ ದೈವಗಳು :

### ೨.೨.೧ ಶ್ರೀ ಹಾಲಸಿದ್ಧೇಶ್ವರ :

ಹಾಲುಮತದ ದೇವರುಗಳಲ್ಲಿ ಸಿದ್ಧರದು ಒಂದು ಪರಂಪರೆಯೇ ಬೆಳೆದು ಬಂದಿದೆ. ಅದರಲ್ಲಿ ಭಕ್ತರ ಕಾಮಧೇನು ಎಂದು ಹೆಸರು ವಾಸಿಯಾದ ಶ್ರೀ ಹಾಲಸಿದ್ಧೇಶ್ವರನದು ಕೂಡ ಒಂದು ಚರಿತ್ರೆ ಇದೆ.

ಇಲ್ಲಿಯ ವರೆಗೆ ಹಾಲಸಿದ್ಧೇಶ್ವರನ ಬಗ್ಗೆ ಯಾವುದೇ ಹಾಲುಮತ ಪುಸ್ತಕಗಳಲ್ಲಿ ಉಲ್ಲೇಖವಿಲ್ಲ. ಆದರೆ ನಾವು ಡೊಳ್ಳಿನ ಹಾಡುಗಳಲ್ಲಿ ಶ್ರೀ ಹಾಲಸಿದ್ಧೇಶ್ವರನ ಚರಿತ್ರೆಯನ್ನು ತಿಳಿಯುಬಹುದು.

ಶ್ರೀ ಹಾಲಸಿದ್ಧೇಶ್ವರನ ತಂದೆ - ತಾಯಿಯವರು ಮೂಡಣ ದಿಕ್ಕಿಗೆ ಬಂದಾಗ 'ಚಂದನ ಚೌತಿ' ಎಂಬ ಭೀಕರ ಬರ ಬೀಳುತ್ತದೆ. ಆ ಬರದಲ್ಲಿ ಜನರಿಗೆ ಕುಡಿಯಲು ನೀರು, ತಿನ್ನಲು ಆಹಾರ

ಸಿಗದಂತಾಗಿ ಬಹಳಷ್ಟು ಸಂಕಷ್ಟಕ್ಕೀಡಾಗುತ್ತಾರೆ. ಆ ಒಂದು ಸಂದಿಗ್ಧ ಪರಿಸ್ಥಿತಿಯಲ್ಲಿ ಹಾಲು ಹಸುಳೆಯಾಗಿರತಕ್ಕಂತಹ ಆ ಪುಟ್ಟ ಕಂದನನ್ನು ಮಾರಿ ಬಿಡುತ್ತಾರೆ. ತಂದೆ–ತಾಯಿ ಅವನನ್ನು ಬಿಟ್ಟ ನಂತರ ಅವನು ಮೂಡಲನಾಡ ಬಿಟ್ಟು ಪಡವಲ ನಾಡಿಗೆ ಅಂದರೆ ಕೊಲ್ಲಾಪೂರಕ್ಕೆ ಹೋಗುತ್ತಾನೆ. ಕೊಲ್ಲಾಪುರದ ಊರಾಗ 'ರಾಕಾಳಿ ಪದ್ಮಾಳೀನ'; ರಾಕಾಳಿ ಪದ್ಮಾಳೆಂದರೆ 'ಸಿದ್ದರು ಕಡದ ಕೆರೆ' ಎಂಬ ಹೆಸರು. ಆ ಕೆರೆಯ ದಂಡೆಗೆ ಹೋಗಿ ಹಾಲಸಿದ್ಧೇಶ್ವರ ಏಕಾಂಗಿಯಾಗಿ ನಿಂತುಕೊಂಡಿದ್ದ. ಆ ಕೆರೆಗೆ ನೀರು ಕುಡಿಸಲೆಂದು ಎತ್ತು–ಎಮ್ಮೆಗಳನ್ನು ಹೊಡೆದುಕೊಂಡು ಎಲೆಗಾರ ತುಳಜಣ್ಣ ಕೆರೆಯ ದಂಡೆಗೆ ಬರುತ್ತಾನೆ. ಅಲ್ಲಿ ನಿಂತುಕೊಂಡಿದ್ದ ಹುಡುಗನನ್ನು ನೋಡಿ ತುಳಜಣ್ಣ ಕೈಮಾಡಿ ಕರೆದು "ಏ! ತಮ್ಮಾ ನೀನು ಯಾರು"? ಏಕಾಂಗಿಯಾಗಿ ಏಕೆ ನಿಂತುಕೊಂಡಿದ್ದಿ? ನಿನ್ನ ಊರು ಯಾವುದು? ಯಾವ ದಿಕ್ಕಿನಿಂದ, ಯಾವ ಪಟ್ಟಣದಿಂದ ನೀನು ಬಂದಿದ್ದು? ನಿನ್ನ ತಂದೆ – ತಾಯಿಯ ಹೆಸರೇನು? ಎಂದು ಕೇಳುತ್ತಾನೆ.

"ನಾನು ಯಾವ ಪಟ್ಟಣದಂವ ಅಲ್ಲ, ಯಾವ ದಿಕ್ಕಿನವನೂ ಅಲ್ಲ, ನಮ್ಮ ತಂದೆ–ತಾಯಿಯರು ಚಂದನ ಚೌತಿ ಬರದಾಗ ಕಂದನ ಮಾರಕೊಂಡ ಹೋಗ್ಯಾರು, ನನ್ನ ಹೆಸರು ನವಲಣ್ಣ" ಎಂದು ತನ್ನ ಪರಿಚಯ ಮಾಡಿಕೊಡುತ್ತಾನೆ. ಅಂದರೆ ಹಾಲಸಿದ್ಧನ ಬಾಲ್ಯದ ಹೆಸರು 'ನವಲಣ್ಣ' ಎಂದು ನಮಗೆ ಗೊತ್ತಾಗುತ್ತದೆ. ಕಂಕಣವಾಡಿಯ ಹಾಲಸಿದ್ಧನಾಥನಾದುದು ಇದೇ ಮಾದರಿಯಲ್ಲಿದೆ.

ಆಗ ತುಳಜಣ್ಣ "ನೀನು ನಮ್ಮ ಮನೆಗೆ ಬಾ ನವಲಣ್ಣ. ನೀನು ನಮ್ಮ ಮನೆಯಲ್ಲಿ ಚಾಕರಿ ಇರುತ್ತಿಯೇನೋ?" ಎಂದಾಗ ಅಡಿಗಲ್ಲನಾಡಸಿದ್ದನೆನಿಸಿಕೊಂಡಿರುವ ಶ್ರೀಹಾಲಸಿದ್ಧನು "ನನಗೆ ಹೊಟ್ಟೆಗೆ ಅಂಬಲಿ, ಹೊರಲಿಕ್ಕೆ ಹೊದಿಕೆ ಕೊಟ್ಟರೆ ನಿನ್ನ ಮನೆಯಲ್ಲಿ ಚಾಕರಿ ಇರುತ್ತೇನೆ"–ಎಂದು ಹೇಳಿದಾಗ ಎಲೆಗಾರ ತುಳಜಣ್ಣ ಅವನನ್ನು ಮನೆಗೆ ಕರೆದುಕೊಂಡು ಹೋಗಿ ಹಾಲಸಿದ್ದನಿಗೆ ಮುಂಜಾನೆಯಿಂದ ಸಾಯಂಕಾಲದ ವರೆಗೆ ದನಕರುಗಳನ್ನು ಮೇಯಿಸುವ ಕೆಲಸ ಬೆಳತನಕ ಎಲಿಯ ಕೋತಿ ಕೆಲಸ ಅಂದರೆ (ಎಲೆಕತ್ತರಿಸುವ ಕೆಲಸ) ವನ್ನು ಗೋಕಾಕ ಎಂಬ ಊರಲ್ಲಿ, ಗೊಲ್ಲಾಳರಟ್ಟಿ ಊರಲ್ಲಿ ನೇಮಿಸುತ್ತಾನೆ.

ಎಲೆಗಾರ ತುಳಜಣ್ಣನ ಮನೆಯಲ್ಲಿ ೧೨ ವರ್ಷಗಳ ಪರ್ಯಂತರ ಕಷ್ಟಕರ ಚಾಕರಿ ಮಾಡುತ್ತಾ ೧೨ ವರ್ಷ ತನಕ ಯಾವ ಆಹಾರವನ್ನು ಸೇವಿಸುತ್ತಿದ್ದನೆಂದರೆ ಕೇವಲ ಒಂದು ದಿವಸಕ್ಕೆ ೨೫ ಎಲೆಗಳನ್ನು ತಿಂದು ಜೀವಿಸಿ ಇಷ್ಟೆಲ್ಲಾ ಚಾಕರಿ ಮಾಡಿದ ಮೇಲೆ ಹಾಲಸಿದ್ಧ ತುಳಜಣ್ಣನಿಗೆ "ಹೊಟ್ಟೆಗೆ ಅಂಬಲಿ ಹೊರಲಿಕ್ಕೆ ಹೊದಿಕೆ"ಯನ್ನು ಕೇಳಿದಾಗ ತುಳಜಣ್ಣ ಭಯಂಕರ ಸಿಟ್ಟಿಗೆ ಬಂದು ಕಣ್ಣು ಕಿಸಿದು ಕೈಮೇಲೆ ಮಾಡಿ ಬಡಿಯಲಿಕ್ಕೆ ಬರುತ್ತಾನೆ.

ಆಗ ಮಾಯರೂಪದ ಹಾಲಣ್ಣ ಮಾಯದ ಮಾತುಗಳನ್ನು ಆಡಿ "ನಿನ್ನ ಮನೆತನ ಮೊದಲು ಹೇಗೆ ಇತ್ತೋ ಹಾಗೇ ಆಗಲಿ, ರೊಕ್ಕ ರೂಪಾಯಿ ಇದ್ದಿಲು ಆಗಲಿ, ನಿನ್ನ ಮನ್ಯಾಗಿನ ದನಗೋಳೆಲ್ಲ

ತನ್ನ ಜೀವನವನ್ನು ಪಾವನ ಮಾಡಿಕೊಂಡು ಅಪ್ಪನಟ್ಟಿಗೆ ಒಂದು ಸ್ಥಾನ ಮಾಡಿದ, "ಹುಕ್ಕೇರಿಗೊಂದು ಸ್ಥಾನ, ಗುಡ್ಡದ ಬ್ಯಾಕೂಡಕ್ಕೆ ಒಂದು ಸ್ಥಾನ, ಕಂಕಣವಾಡಿ ಮತ್ತು ಹಿಡಕಲ್ಲಕ್ಕೆ ಒಂದು ಸ್ಥಾನ ಮಾಡಿ ಹಾಲಸಿದ್ಧನೆಂದು ಪ್ರಖ್ಯಾತಿಯನ್ನು ಪಡೆದಿದ್ದಾನೆ." ಎಂದು ನಂಬಿಗೆ.

ದೈವ ಪುರುಷನಾಗಿ ರಾಯಬಾಗ ತಾಲೂಕಿನಲ್ಲಿ ಅಲೆಯುತ್ತ ಬಂದ ಶ್ರೀ ಹಾಲಸಿದ್ಧನು ಕಂಕಣವಾಡಿ ಗ್ರಾಮದಲ್ಲಿ ನೆಲಸಬೇಕೆಂದು ನಿರ್ಧರಿಸಿದನು. ಕಂಕಣವಾಡಿ ಗ್ರಾಮದ ಹೊರಗೆ ಪ್ರತಿದಿನ ದೇಸಾಯಿಯವರ ಆಕಳ ಹಿಂಡನ್ನು ಮೇಯಿಸುವುದಕ್ಕೆ ದನ ಕಾಯುವವನು ಒಯ್ಯುತ್ತಿದ್ದನು. ಹಾಗೆ ಒಂದು ದಿನ ಹಿಂಡಿನೊಳಗಿನ ಒಂದು ಬರಡು ಆಕಳು ಹುತ್ತದ ಮೇಲೆ ನಿಂತು ಹಾವಿಗೆ ಹಾಲು ಕುಡಿಸುವುದನ್ನು ಆಕಸ್ಮಿಕವಾಗಿ ಕಂಡ. ದನ ಕಾಯುವವನು ಈ ವಿಷಯವನ್ನು ಮಾಲಿಕರಾದ ದೇಸಾಯಿಯವರಿಗೆ ಹೇಳಿದನು. ಈ ಘಟನೆಯನ್ನು ಪರೀಕ್ಷಿಸಲು ದೇಸಾಯಿಯವರು ಮರುದಿನ ಊರ ಹೊರಗೆ ಹುತ್ತದ ಕಡೆಗೆ ಬರುತ್ತಾರೆ. ಅಲ್ಲಿ ಈ ದೃಶ್ಯ ಕಂಡು ಬೆರಗಾಗುತ್ತಾರೆ.

ಇತ್ತ ಮತ್ತೊಂದು ಕಡೆ ಇಟ್ನಾಳದ ಅಜ್ಜನಳ್ಳಿ ರಾಯಪ್ಪ ಎಂಬುವನು ಗುರುಗುದ್ದಿ ಹಳ್ಳದ ಸುತ್ತ ಆಡು ಕುರಿಗಳನ್ನು ಮೇಯಿಸುತ್ತಿದ್ದನು. ಮತ್ತು ದಿನಾಲು ಬರುವಾಗ ಹಾಲು ಬಿಂದಿಗೆ ಹೊತ್ತುಕೊಂಡು ಬರುತ್ತಿದ್ದನು. ಒಂದು ದಿನ ಹಾಲು ಬಿಂದಿಗೆಯಲ್ಲಿ ಹಾವು ಹಾಲು ಕುಡಿಯುವುದನ್ನು ಕಂಡು ಬೆರಗಾದನು. ಹೀಗೆ ಮೂರು ದಿನವೂ ಹಾವು ಹಾಲು ಕುಡಿಯುವುದನ್ನು ಕಂಡು ಬೆಚ್ಚಿ ಹೋದನು.

ಮೂರನೇ ದಿನ ಅಜನಳ್ಳಿ ರಾಯಪ್ಪನ ಕನಸಿನಲ್ಲಿ ಬಂದು ಶ್ರೀ ಹಾಲಸಿದ್ಧನು "ನಾನು ಹಾಲಸಿದ್ಧನು, ನೀನು ನನ್ನ ದೇವಾಲಯದ ಪೂಜಾರಿಯಾಗಿ ಸೇವೆ ಮಾಡಬೇಕೆಂದು" ತಿಳಿಸುತ್ತಾನೆ.

ಅದೇ ದಿನ ಕಂಕಣವಾಡಿ ದೇಸಾಯಿಯವರ ಕನಸಿನಲ್ಲಿಯೂ ಹೋಗಿ "ಹುತ್ತದಲ್ಲಿ ಹಾಲು ಕುಡಿದ ಹಾವು ನಾನೇ ಶ್ರೀ ಹಾಲಸಿದ್ಧನೆಂದು ತಿಳಿಸುತ್ತಾನೆ. ಮತ್ತು ನನ್ನ ದೇವಸ್ಥಾನಕ್ಕೆ ನೀನೆ ಹಿರಿತನ ಮಾಡಬೇಕೆಂದು ತಿಳಿಸುತ್ತಾನೆ."

ಈ ರೀತಿ ಕಂಕಣವಾಡಿಯಲ್ಲಿ ಅಜನಳ್ಳಿ ರಾಯಪ್ಪ ಪೂಜಾರಿಯಾಗಿ ಕಂಕಣವಾಡಿ ದೇಸಾಯಿಯವರ ಹಿರಿತನದಲ್ಲಿ ಶ್ರೀ ಹಾಲಸಿದ್ಧನ ದೇವಾಲಯ ನಿರ್ಮಾಣವಾಗುತ್ತದೆ.

ಕಾಲ ಕಳೆದಂತೆ ಶ್ರೀ ಹಾಲಸಿದ್ಧನ ಮಹಿಮೆಗಳು, ಪವಾಡಗಳು ಸುತ್ತ ನಾಡಿನಲ್ಲಿ ಪಸರಿಸಿ ದಿನೇ ದಿನೇ ಭಕ್ತರ ಸಂಖ್ಯೆ ಏರುತ್ತಾ ಹೋಗುತ್ತದೆ. ಇತ್ತ ಹಿಡಕಲ್ಲದ ಘಂಟಿ ಮನೆತನದವರಿಗೆ ತಮ್ಮ ವಂಶದೀಪಕ್ಕೆ ಗಂಡು ಮಗು ಇಲ್ಲವೆಂದು ಕೊರಗು ಇರುತ್ತದೆ. ಶ್ರೀ ಹಾಲಸಿದ್ಧೇಶ್ವರನಿಗೆ ಬೇಡಿಕೊಂಡಾಗ ಘಂಟಿ ಮನೆತನದವರಿಗೆ ಗಂಡು ಸಂತಾನ ಪ್ರಾಪ್ತಿಯಾಗುತ್ತದೆ. ಆಗಿನಿಂದ ಭಕ್ತಿ ಹೆಚ್ಚಿಸಿಕೊಂಡ ಘಂಟಿ

ಮನೆತನದವರು ಶ್ರೀ ಹಾಲಸಿದ್ಧನ ಮೂರ್ತಿಯನ್ನು ಹಿಡಕಲ್ಲಕ್ಕೆ ತಂದು ದೇವಾಲಯ ಕಟ್ಟಿಸುತ್ತಾರೆ. ಅನಂತರ ಕಂಕಣವಾಡಿ ಪೂಜಾರಿಯವರೇ ಹಿಡಕಲ್ಲಕ್ಕೆ ಪೂಜಾರಿಯಾಗಿ ಬರಬೇಕೆಂದು ಕೇಳಿದಾಗ ನಾವು ಹಿಡಕಲ್ಲಕ್ಕೆ ಬಂದರೆ ನಮ್ಮ ಜೀವನೋಪಾಯ ಹೇಗೆ ಎಂದು ಕೇಳಿದಾಗ ಶ್ರೀ ಹಾಲಸಿದ್ಧನ ಪೂಜೆ ಮಾಡುವವರಿಗಾಗಿಯೇ ಘಂಟಿ ಮನೆತನದವರು ೮ ಎಕರೆ ಜಮೀನನ್ನು ಉಣ್ಣಲು ಬಿಟ್ಟು ಕೊಡುತ್ತಾರೆ. ಇಂದಿಗೂ ಹಿಡಕಲ್ಲದಲ್ಲಿ ೮ ಎಕರೆ ಜಮೀನು ಪೂಜೇರಿ ಮನೆತನದವರಲ್ಲಿ ಇರುವುದನ್ನು ಕಾಣುತ್ತೇವೆ.

ಕಂಕಣವಾಡಿ ಮೂಲದೇವರಾದ ಶ್ರೀ ಹಾಲಸಿದ್ಧನು ಪ್ರತಿ ೧೨ ವರ್ಷಕ್ಕೊಮ್ಮೆ ಅಥಣಿ ತಾಲೂಕಿನ ಹುಲಗಬಾಳಕ್ಕೆ ಹೊಳೆ ಜಳಕಕ್ಕೆ ಹಿಡಕಲ್ಲ ಮಾರ್ಗವಾಗಿ ಹೋಗುತ್ತಾನೆ. ಈ ರೀತಿ ಹೋಗುವಾಗ ಹಿಡಕಲ್ಲದಲ್ಲಿ ಒಂದು ರಾತ್ರಿ ಕಳೆಯುತ್ತಾನೆ. ಬೆಳಿಗ್ಗೆ ಹೋಗುವಾಗ ದೇವರ ಹೇಳಿಕೆ ಹೇಳುವುದು ನಡೆದು ಬಂದ ವಾಡಿಕೆ. ಅಂದಿನ ಒಂದು ದಿನದ ಊಟದ ವ್ಯವಸ್ಥೆಯನ್ನು ಹಿಡಕಲ್ಲದ ಮಗದುಮ್ಮ ಮನೆತನದವರು ನೋಡಿಕೊಳ್ಳುತ್ತಾರೆ.

ಹಿಡಕಲ್ಲದಲ್ಲಿ ಈಗಿರುವ ಹಾಲಸಿದ್ಧನ ಗದ್ದುಗೆ ಮೂರನೆಯದೆಂದು ಹಿರಿಯ ಭಕ್ತರಾದ ಮಾರುತಿ ಘಂಟಿ ಹೇಳುತ್ತಾರೆ. ಅಂದರೆ ಈ ಗುಡಿಯು ಎಷ್ಟು ಪ್ರಾಚೀನ ಕಾಲದ್ದೆಂದು ಊಹಿಸಬಹುದಾಗಿದೆ.

ಹಿಡಕಲ್ಲದ ಅನೇಕ ಮನೆತನದವರ ಮನೆ ದೇವರಾಗಿರುವವ ಶ್ರೀ ಹಾಲಸಿದ್ಧನ ಪ್ರತಿವರ್ಷ ಜಾತ್ರೆ ವಿಶೇಷ ಕಾರ್ಯಕ್ರಮ ಜರುಗುವುದನ್ನು ನಾವು ಕಾಣುತ್ತೇವೆ.

ಇತ್ತೀಚಿನ ವರ್ಷಗಳಲ್ಲಿ ಜಾತ್ರೆಯನ್ನು ಅತ್ಯಂತ ವಿಜೃಂಭಣೆ ಹಾಗೂ ಉತ್ಸಾಹದಿಂದ ಆಚರಿಸುವುದನ್ನು ನಾವು ಕಾಣುತ್ತೇವೆ. ಜಾತ್ರೆಯಲ್ಲಿ ಊರಿನ ಎಲ್ಲಾ ಜನರಿಗೂ ಎರಡು ದಿನ ಅನ್ನ ಪ್ರಸಾದ ಕಾರ್ಯಕ್ರಮ ಮತ್ತು ದೊಡ್ಡ ಪ್ರಮಾಣದ ಡೊಳ್ಳಿನ ಹಾಡಿನ ಮೇಳಗಳಿಂದ ಹಾಡಿಕೆ ಕಾರ್ಯಕ್ರಮ ಸಂಘಟಿಸಲಾಗುತ್ತದೆ.

ಹೀಗೆ ತಾಲೂಕಿನ ಹಾಲುಮತ ದೈವಗಳಲ್ಲಿ ಒಬ್ಬರಾಗಿರುವ ಶ್ರೀ ಹಾಲಸಿದ್ಧನು ಅನೇಕ ಭಕ್ತರನ್ನು ಹೊಂದಿರುವ ಪ್ರಮುಖ ಹಾಲುಮತ ದೈವಗಳಲ್ಲಿ ಒಬ್ಬರಾಗಿರುವುದು ನಮಗೆ ಕಾಣಸಿಗುತ್ತದೆ.

**ಜಾತ್ರೆ ಉತ್ಸವ :**

ಕಂಕಣವಾಡಿಯ ಶ್ರೀ ಹಾಲಸಿದ್ಧೇಶ್ವರನ ಜಾತ್ರೆಯ ವರ್ಷದಲ್ಲಿ ೨ ಬಾರಿ ಅತಿ ವಿಜೃಂಭನೆಯಿಂದ ಜರುಗುವುದು. ಮೊದಲನೆಯ ಜಾತ್ರೆಯು

೧) **ಸೀಗಿ ಹುಣ್ಣಿಮೆ ದಿವಸ**

೨) **ಯುಗಾದಿ ಅಮವಾಸ್ಯೆ ದಿವಸ**

ಸೀಗಿ ಹುಣ್ಣಿಮೆ ದಿವಸ ಜಾತ್ರೆಯ ಕರಿಕಟ್ಟುವುದು. ಕಂಕಣವಾಡಿಯ ದೇಸಾಯಿ ಅವರ ಮನೆತನದಲ್ಲಿ ಹಾಲಸಿದ್ಧನ ಡೊಳ್ಳಿನ ವಾದ್ಯಗಳು, ದೇವರ ಕೋತವಾಲ (ಕುದುರೆ) ಹಾಗೂ ಸತ್ತಿಗೆ ಪೂಜಾರಿಗಳು ಬಾರಿಸುತ್ತಾ, ಊದುತ್ತಾ ದೇಸಾಯಿಯವರ ಮನೆಗೆ ಹೋಗಿ ಕರಿಕಟ್ಟುವುದು. ಕರಿಕಟ್ಟಿದ ನಂತರ ೭ ನೇ ದಿನಕ್ಕೆ ಮತ್ತೇ ದೇಸಾಯಿಯವರೇ ಕರಿಹರಿಯುವರು.

ನಂತರ ಏಳು ದಿನಗಳ ಕಾಲ ಡೊಳ್ಳಿನ ಕಾರ್ಯಕ್ರಮ ಜರುಗುವುದು. ೭ನೇ ದಿನ ರಾತ್ರಿ ಸುತ್ತಮುತ್ತಲಿನ ಎಲ್ಲಾ ಡೊಳ್ಳಿನ ಮೇಳದವರು ಹಾಗೂ ಡೊಳ್ಳಿನ ವಾಲಗದವರು, ದತ್ತಿ ಕುಣಿತದವರು ಭಾಗವಹಿಸುತ್ತಾರೆ. ಇಲ್ಲಿಯ ಒಂದು ವಿಶೇಷವೆಂದರೆ ಯಾವ ಡೊಳ್ಳಿನ ಮೇಳದವರಿಗೂ ಆಮಂತ್ರಣ ಕೊಡುವುದಿಲ್ಲ. ಭಕ್ತರು ಇದು ಹಾಲುಮತದ ಮಠಮನೆ ಎಂದು ಭಕ್ತಿಯಿಂದ ಬರುತ್ತಾರೆ. ರಾತ್ರಿವಿಡೀ ಡೊಳ್ಳಿನ ಹಾಡುಗಳನ್ನು ಹಾಡುತ್ತಾರೆ.

೭ನೇ ದಿನದ ಮುಂಜಾನೆ ವಾಲಗವನ್ನು ಬಾರಿಸುತ್ತಾರೆ. ಹಾಲಸಿದ್ಧನ ಗುಡಿಯಿಂದ ಪೂರ್ವಕ್ಕೆ ಆರ್ಧಾಪರ್ಲಾಂಗದಲ್ಲಿ ಗುರು ಇಟರಾಯನ ಗುಡಿ ಇರುವುದು. ಗುರುವನ್ನು ಕರೆದುಕೊಂಡು ಬರಲು ಪಲ್ಲಕ್ಕಿ ದೇವರ ಕೊತವಾಲ ಹಾಗೂ ಬ್ಯಾಕೂಡ ಗ್ರಾಮದ ಲಕ್ಷ್ಮೀ ದೇವರ ಪಲ್ಲಕ್ಕಿ, ಡೊಳ್ಳಿನ ಕೈಪಟ್ಟಿ, ಡೊಳ್ಳು ಬಾರಿಸುತ್ತಾ ಇಟರಾಯನ ಗುಡಿಗೆ ಹೋಗುವುದು. ಅಲ್ಲಿ ಅಲಗ ಹಾಯುವುದು ಒಂದು ವಿಶೇಷ. ಇದನ್ನು ಸಿದ್ಧರ ಸಿದ್ಧಾಟಿಗೆ ಎನ್ನುವರು. ನಂತರ ಕರಿಹರಿಯಲಿಕ್ಕೆ ಹಾಲಸಿದ್ಧೇಶ್ವರ ಗುರು ಇಟರಾಯನನ್ನು ಕರೆದುಕೊಂಡು ತಮ್ಮ ಮೂಲ ಸ್ಥಾನಕ್ಕೆ ಬರುವರು. ಮೊದಲಿನ ಸಂಪ್ರದಾಯದಂತೆ ಕಂಕಣವಾಡಿಯ ದೇಸಾಯಿ ಮನೆತನದವರು ಕರಿಹರಿಯಲಿಕ್ಕೆ ನೈವೇದ್ಯ ತೆಂಗಿನ ಕಾಯಿಗಳನ್ನು ತೆಗೆದುಕೊಂಡು ಬರುವರು. ಅವುಗಳನ್ನು ಪಲ್ಲಕ್ಕಿಯಲ್ಲಿ ಇಡುವರು. ಪೂಜಾರಿಯು ಕರಿಹರಿಯುವ ವೇಳೆಗೆ ಹಾಲಸಿದ್ಧನ ಆಜ್ಞೆಯ ಪ್ರಕಾರ ಅವರ ಕೈಯಲ್ಲಿ ಕಾಯಿ ಒಡೆಯಲಿಕ್ಕೆ ಕೊಡುವರು.

ಕಾಯಿ ಒಡೆದ ನಂತರ ಮೂಲಗದ್ದುಗೆ ಸ್ಥಾನಕ್ಕೆ ಬರುವರು. ಅಷ್ಟರಲ್ಲಿ ಗದ್ದುಗೆಯ ಪೂಜೇರಿಗಳು ಮುಂದಾಗುವ ಮಳೆ, ಬೆಳೆ, ಕುರಿತು ನುಡಿ ಹೇಳುವರು. ನಂತರ ಸುತ್ತಮುತ್ತಲಿನಿಂದ ಬಂದ ಸಮಸ್ತ ಭಕ್ತಾದಿಗಳಿಗೆ ಮಹಾಪ್ರಸಾದ ನೆರವೇರುವುದು.

ಮತ್ತೊಂದು ವಿಶೇಷವೆಂದರೆ ಹಾಲುಮತದ ದೇವರಾದರೂ ಹಿಂದೂ ಮುಸ್ಲಿಂ ಒಂದೇ ಎನ್ನುವಂತೆ ಕೆಳಗಡೆ ಹಿಂದೂ ಧರ್ಮದ ಪ್ರಕಾರ ಗುಡಿಯಿರುವುದು. ಮೇಲ್ಗಡೆ ಎರಡು ದೊಡ್ಡ ಗುಮ್ಮಟಗಳಿವೆ. ಹಾಲಸಿದ್ಧನ ಪಲ್ಲಕ್ಕಿ ಅಗಸರ ಮನೆಯನ್ನು ಬಿಟ್ಟರೆ ಬೇರೆ ಯಾವ ಕಡೆಗೂ ಹೋಗುವುದಿಲ್ಲ. ಈ ದೇವರಿಗೆ ಸಸ್ಯಾಹಾರಿ ನೈವೇದ್ಯವನ್ನು ಹಿಡಿಯಬೇಕು. ಹೆಚ್ಚಾಗಿ ಹಾಲಸಿದ್ಧನ ಭಕ್ತಾದಿಗಳು ಶಾಖಾಹಾರಿಗಳಾಗಿಯೇ ಇದ್ದಾರೆ. ಹಾಲುಮತದಲ್ಲಿ ಹಾಲಸಿದ್ಧನ ಇನ್ನೊಂದು ವಿಶೇಷವೆಂದರೆ ದಿನದಲ್ಲಿ ಮೂರು ಹೊತ್ತು ಪೂಜೆ ಜರುಗುವುದು.

ಇದೇ ರೀತಿ ಯುಗಾದಿ ಅಮವಾಸ್ಯಗೆ ಜಾತ್ರೆ ಜರುಗುವುದು. ಸೀಗಿ ಹುಣ್ಣಿಮೆ ಜಾತ್ರೆಗೂ, ಯುಗಾದಿ ಜಾತ್ರೆಗೂ ೬ ತಿಂಗಳು ಅಂತರವಿರುತ್ತದೆ. ಸೀಗಿ ಹುಣ್ಣಿಮೆ ಜಾತ್ರೆಗೆ ಏಳು ದಿನ ಕರಿಕಟ್ಟುವುದು, ಯುಗಾದಿ ಅಮವಾಸ್ಯೆಗೆ ೫ ದಿನ ಕರಿಕಟ್ಟುವುದು.

ರಾಯಬಾಗ ತಾಲೂಕಿನಲ್ಲಿ ಕಂಕಣವಾಡಿ ಹಾಗೂ ಹಿಡಕಲ್ಲಗಳಲ್ಲಿ ಹಾಲಸಿದ್ಧನ ದೇವಸ್ಥಾನಗಳಿವೆ.

ಕಂಕಣವಾಡಿಯ ಶ್ರೀ ಹಾಲಸಿದ್ಧೇಶ್ವರ ದೇವರ ಜಾತ್ರೆಯು ಯುಗಾದಿ ಅಮವಾಸ್ಯೆಗೆ ಜಾತ್ರೆಜರುಗುವುದು, ಅಲ್ಲಿ ಕರಿಹರಿದ ದಿವಸವೇ ಹಿಡಕಲ್ಲ ಗ್ರಾಮದಲ್ಲಿ ಕರಿಕಟ್ಟುವುದು. ಕರಿಕಟ್ಟಿದ ನಾಲ್ಕನೇ ದಿನ ಹಿಡಕಲ್ಲ ಬಸ್‌ಸ್ಟ್ಯಾಂಡದಿಂದ ಗುಡಿಯವರೆಗೆ ಮೆರವಣಿಗೆ ಜರುಗುವುದು. ಮೆರವಣಿಗೆಯಲ್ಲಿ ಕಂಕಣವಾಡಿಯ ಕೊತವಾಲ (ಕುದರೆ), ಪೂಜಾರಿಗಳು, ಸುತ್ತಲಿನ ವಾಲಗದ ಮೇಳದವರು ಭಾಗವಹಿಸುವರು. ಮಾಳಿಂಗರಾಯನ ಭಾವ ಚಿತ್ರದ ಮೆರವಣಿಗೆ ನಡೆಯುವುದು. ಮೆರವಣಿಗೆಯಲ್ಲಿ ಕೈಪಟ್ಟು ಬಾರಿಸುವುದು ವಿಶೇಷವಾದರೆ ಮತ್ತೊಂದು ಕಡೆ ದತ್ತಿಕುಣಿತ, ಇನ್ನೊಂದೆಡೆ, ಅಲಗ ಹಾಯುವುದು, ಭಂಡಾರ ಹಾರಿಸುವುದು, ಇವು ಮೆರವಣಿಗೆಯ ಆಕರ್ಷಣೆಗಳು.

### ೨.೨.೨ ಶ್ರೀ ಅಮೋಘಸಿದ್ಧೇಶ್ವರ :

ವಿಜಾಪೂರದ ವಾಯವ್ಯ ದಿಕ್ಕಿಗೆ ಸುಮಾರು ೧೫ ಕಿ. ಮೀ. ಅಂತರದಲ್ಲಿ 'ಮುಮ್ಮಟಗಿರಿ' ಎಂಬ ಹೆಸರಿನ ಎತ್ತರವಾದ ಪ್ರದೇಶವಿದೆ. ಅಲ್ಲಿ ಅಮೋಘಸಿದ್ಧನ ದೇವಾಲಯವಿದ್ದು, ಅದು ಇಂದಿಗೂ ವರ್ಗ, ವರ್ಣ ಹಾಗೂ ಲಿಂಗಭೇದಗಳಿಲ್ಲದೆ ಭಕ್ತ ಜನರನ್ನು ಆಕರ್ಷಿಸುತ್ತಲಿದೆ. ಈ 'ಮುಮ್ಮಟಗಿರಿ'ಯಿಂದ ಐದಾರು ಕಿಲೋ ಮೀಟರ್ ಅಂತರದಲಿ ಮೂರು ಗ್ರಾಮಗಳಿವೆ. ಅವು –

೧) ಅರಕೇರಿ

೨) ಜಾಲಗೇರಿ

೩) ಸಿದ್ದಾಪೂರ

ಈ ಮೂರು ಗ್ರಾಮಗಳ ಸೀಮೆಗಳು ಕೂಡಿದ ಸ್ಥಳದಲ್ಲಿ ಭವ್ಯವಾದ ಮಂದಿರ ತಲೆ ಎತ್ತಿ ನಿಂತಿದೆ.

ಆ ಕಾರಣವಾಗಿ ಇದಕ್ಕೆ 'ಮುಮ್ಮಟಗಿರಿ' ಎಂದಿರಬಹುದು. ಮೂರು ಮಡ್ಡಿ ಮಟ್ಟಿಯಿಂದ ಕೂಡಿದ ಎತ್ತರ ಪ್ರದೇಶ. ಅದು 'ಮುಮ್ಮಟಗಿರಿ' ಎಂದಾಗಿರಬೇಕು. ಈ ಮುಮ್ಮಟಗಿರಿಯ ಆರಾಧ್ಯ ದೈವವೇ ಅಮೋಘಸಿದ್ಧ.

'ಅಮೋಘಸಿದ್ಧ' ಕುರುಬರ ಗುರುಗಳಾದ ಒಡೆಯರ ಮೂಲ ಪುರುಷ. ಈತ ಮೇಲಾದ ಶಿವಭಕ್ತ. ಅಮೋಘವಾದ ದೈವಭಕ್ತಿ ಪ್ರಕಟ ಮಾಡಿದುದಕ್ಕೆ 'ಅಮೋಘಸಿದ್ಧ' ಎಂಬ ಹೆಸರು ಬಂದಿರಬೇಕೆಂದು ಹೇಳಲಾಗುತ್ತದೆ. ಈತನ ಕಥೆ, ಪುರಾಣದ ನೆಲೆಯಿಂದ ಉಗಮವಾಗಿ, ಕಲ್ಯಾಣ ಶರಣರು, ಸೊನ್ನಲಿಗೆ ಸಿದ್ಧರಾಮಯ್ಯಗಳ ಕಥೆಯೊಂದಿಗೆ ತಳುಕು ಹಾಕಿಕೊಂಡು, ಮುಸ್ಲಿಂ ದೊರೆಗಳಾದ ಸುಲ್ತಾನ, ಶಾಹಿಗಳ ಮೇಲೆ ಪ್ರಭಾವ ಬೀರಿ, ಪಾಳೆಗಾರರಾದ ನಾಡಗೌಡ, ಸರನಾಡಗೌಡರನ್ನು ಹರಸುವಲ್ಲಿ ಮುಕ್ತಾಯವಾಗುತ್ತದೆ. ಹೀಗಾಗಿ ಅಮೋಘಸಿದ್ಧನ ಚರಿತ್ರೆ ಕಟ್ಟುವುದು ಕಷ್ಟದಾಯಕವಾಗುತ್ತದೆ. ಇಲ್ಲಿ ನಮಗೆ ಅಮೋಘಸಿದ್ಧನ ಚರಿತ್ರೆಗಿಂತ ಆತನ ಪರಂಪರೆಯು ತುಂಬಾ ಕುತೂಹಲ ಮೂಡಿಸುವಂಥದ್ದಾಗಿದೆ. ಶಿವನಿಂದ ವರ ಪಡೆದು ಕೈಲಾಸದಿಂದ ತನ್ನ ಗುರುವಿನೊಂದಿಗೆ ಅಮೋಘಸಿದ್ಧನು ಭೂಲೋಕಕ್ಕೆ ಬರುತ್ತಾನೆ ಎಂದು ಹೇಳುವರು. ಮಾರ್ಗ ಮಧ್ಯದಲ್ಲಿ ತಪ್ಪಿಯೂ ಹಿಂದುರುಗಿ ನೋಡಕೂಡದು ಎಂಬುದಾಗಿ ಕರಾರು. ಭೂಮಿಯ ಮೇಲೆ ಲೀಲೆ ತೋರಿಸಲು ಬರುತ್ತಿರುವ ಅಮೋಘಸಿದ್ಧನು ಹಿಂದುರುಗಿ ನೋಡುತ್ತಾನೆ. ನೋಡಿದ ಸ್ಥಳದಲ್ಲಿಯೇ ಗುರು ಸೋಮಲಿಂಗನು ಮಾಯವಾಗುತ್ತಾನೆ. ಆಗ ಅಮೋಘಸಿದ್ಧನು ಅಲ್ಲಿಯೇ ನೆಲೆ ನಿಲ್ಲುತ್ತಾನೆ. ಹೀಗೆ ನಿಂತ ಸ್ಥಳವೇ 'ಮುಮ್ಮಟಗಿರಿ' ಆಗಿದೆ.

ಅಮೋಘಸಿದ್ಧನ ಹೆಂಡತಿಯ ಹೆಸರು ಪದ್ಮಾವತಿ. ಈತನಿಗೊಬ್ಬ ಶಿಷ್ಯನಿರುತ್ತಾನೆ. ಹೆಸರು ಭೂತಾಳಸಿದ್ಧ. ಪುಣ್ಯದ ಮಕ್ಕಳು ಮೂವರು

೧) ಮಾಹಾಸಿದ್ಧ

೨) ಮುಂಗರಾಯ

೩) ಮಲಕಾರಿಸಿದ್ಧ

ಪುಣ್ಯದ ಮಕ್ಕಳೆಂದರೆ ಶಿಷ್ಯರಾದವರು, ಪಡೆದ ಮಕ್ಕಳು ಎಂದರ್ಥ. ಇನ್ನು ಧರ್ಮದ ಮಕ್ಕಳೆಂದರೆ ಹಡೆದ ಮಕ್ಕಳು ನಾಲ್ವರು. ಒಬ್ಬಳು ಮಗಳು.

೧) ಅವಧೂತ ಸಿದ್ಧ

೨) ಬಿಳಿಯಾನಿ ಸಿದ್ಧ

೩) ಸೋಮಣ್ಣ ಮುತ್ಯಾ

೪) ಕನ್ನಮುತ್ಯಾ

೫) ರೆಬ್ಬವ್ವ (ಮಗಳು)

ಇವಳನ್ನು ತನ್ನ ಗುರುವಿನ ಊರಾದ ಮಕಣಾಪುರದ 'ಹೊನ್ನಪದಪ' ನೆಂಬವನೊಡನೆ ಮದುವೆ ಮಾಡಿ ಕೊಡಲಾಗುತ್ತದೆ. ಅಮೋಘಸಿದ್ಧನಿಂದ ಉತ್ಪತ್ತಿಯಾದ ಈ ಸಂತತಿ ಅಂದರೆ

* ಮಕ್ಕಳು
* ಮೊಮ್ಮಕ್ಕಳು
* ಶಿಷ್ಯರು
* ಪ್ರಶಿಷ್ಯರು

ಇವರು ಮಹಾರಾಷ್ಟ್ರದ ಸಾಂಗಲಿ, ಸಾತಾರಾ, ಸೊಲ್ಲಾಪೂರ ಜಿಲ್ಲೆಗಳಲ್ಲೂ ಕರ್ನಾಟಕದ ವಿಜಾಪೂರ, ಕಲಬುರ್ಗಿ ಜಿಲ್ಲೆಗಳಲ್ಲೂ ನೆಲೆನಿಂತು ದೇವತ್ವದ ಪಟ್ಟಕಟ್ಟಿಸಿಕೊಂಡು ಆರಾಧನಾ ಮೂರ್ತಿಗಳಾಗಿ ಕಂಗೊಳಿಸುತ್ತಾರೆ. ಅಮೋಘಸಿದ್ಧನ ಸಂತತಿಯ ವಿವರವನ್ನು ಹೀಗೆ ಕೊಡಲಾಗುತ್ತದೆ.

* ಅವಧೂತಸಿದ್ಧನ ಸಂತತಿ :

  ೧) ಸಾಲಸಿದ್ಧ

  ೨) ಮಳಿಗಾಲಸಿದ್ಧ

  ೩) ಓಗಪ್ಪ ಒಡೆಯರ

  ೪) ನಾಗಪ್ಪ ಒಡೆಯರ

  ೫) ಕೆಂಚ ಸೋಮಯ್ಯ

* ಬಿಳಿಯಾನಿಸಿದ್ಧನ ಸಂತತಿ :

  ೧) ಬಳ್ಯೋಗಿಸಿದ್ಧ

  ೨) ಯೋಗಸಿದ್ಧ

  ೩) ಪದ್ಯೋಗಸಿದ್ಧ

  ೪) ಪೂಜಾದ ಗೌಡ

  ೫) ಶೀಲಸಿದ್ಧ

* ಸೋಮಣ್ಣ ಮುತ್ಯಾನ ಸಂತತಿ :

೧) ಹಿರಿಯ ಮಲ್ಲಪ್ಪ ಒಡೆಯ

೨) ಚಿಕ್ಕಮಲ್ಲಪ್ಪ ಒಡೆಯ

೩) ಮುತ್ತೈಯಪ್ಪ ಒಡೆಯ

೪) ಮಲಕಾರಿಸಿದ್ಧ

೫) ಓಗಣ್ಣಮುತ್ಯಾ

* ಕನ್ನಮುತ್ಯಾನ ಸಂತತಿ :

೧) ಕರಿಯೋಗಿಸಿದ್ಧ

೨) ಮಲಕಾರಿಸಿದ್ಧ

೩) ಮಹಾಮಾದಣ್ಣಸಿದ್ಧ

ಮತ್ತೆ ಇವರಿಂದ "ನೂರೊಂದು ಜನ ಸಿದ್ಧ ಒಡೆಯರು, ಸಾವಿರದಾ ಒಂದು ಜನ ಸಿದ್ಧ ಒಡೆಯರು, ಸಾವಿರದಾ ಏಳು ನೂರು ಜನ ಸಿದ್ಧ ಒಡೆಯರು, ನವಕೋಟಿಸಿದ್ಧ ಒಡೆಯರು ಎಂಬುದಾಗಿ ಇವರ ಸಂತತಿ ಬೆಳೆದಿದೆ ಎಂದು ಹೇಳಲಾಗುತ್ತದೆ. ಹೀಗೆ ಜನಿಸಿದವರಲ್ಲಿ ಕೆಲವರು ಪಟ್ಟಕ್ಕೆ ಹಾಕಿಸಿಕೊಂಡು ಬ್ರಹ್ಮಚರ್ಯವನ್ನು ಆಚರಿಸುತ್ತ ಯೋಗಮಾರ್ಗದಲ್ಲಿ ನಡೆದು ತಮ್ಮ ಸಿದ್ಧಲೀಲೆಗಳನ್ನು ತೋರುತ್ತ, ವಾಕ್ ಸಿದ್ಧಿಯೊಂದಿಗೆ ಜನಕಲ್ಯಾಣ ಕೆಲಸ ಮಾಡುತ್ತಾ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆ ನಿಲ್ಲುತ್ತಾರೆ. ಈ ಸಂಪ್ರದಾಯದವರಲ್ಲಿ ಇವರ ಹೆಣ್ಣು ಮಕ್ಕಳು 'ಒಡೆಯರಮ್ಮಗಳೆಂದು ಕರೆಸಿಕೊಳ್ಳುವುದು, ಧಾರ್ಮಿಕ ವಿಧಿ-ವಿಧಾನಗಳಲ್ಲಿ ಕಾರ್ಯಗಳನ್ನು ಪೂರೈಸುವುದು ತುಂಬಾ ಪ್ರಗತಿಪರ ವಿಚಾರಗಳಿಂದ ಕೂಡಿದುದಾಗಿದೆ."[೨]

ಇಂಥ ಸ್ತ್ರೀ-ಪುರುಷರು ನೆಲೆನಿಂತ ಪ್ರದೇಶಗಳೆಲ್ಲವೂ ಇವರ ಹೆಸರಿನಿಂದ ಜಾಗೃತಿ ಸ್ಥಳಗಳಾಗಿವೆ. ಗೋಕಾಕ, ಅಥಣಿ, ಐನಾಪೂರ, ಸೌದತ್ತಿ, ಉಗರಗೋಳ, ಅಂಕಲಿ, ಬಬಲೇಶ್ವರ, ಶಿವಣಗಿ, ಸಂಕ, ಮೊರಬ, ಬೋರಗಿ, ಜೇವರಗಿ, ಹಿರೇಪಡಸಲಿ ಸೊಲ್ಲಾಪೂರ, ಕಲ್ಲೂರ, ಡವಳಾರ, ಸುಂಗಠಾಣ, ಅನಂತಪೂರ, ಶಿರನಾಳ, ಸುಲಾದ, ಬಬಲಾದ, ಅಚ್ಚೆಗಾವ, ಚಂದ್ರಾಳ, ಕಾತ್ರಾಳ, ಸಿಂದಗಿ, ಕರಜಗಿ, ಮೈಲಾರಟ್ಟಿ ಹೀಗೆ ಸ್ಥಳಗಳ ಪಟ್ಟಿ ಬೆಳೆಯುತ್ತ ಹೋಗುತ್ತದೆ.

ಈ ಒಡೆಯರ ಪರಂಪರೆಯವರು ಲಿಂಗಾಯತ ವೀರಶೈವರಂತೆ ಮೈಮೇಲೆ ಲಿಂಗಕಟ್ಟಿಕೊಂಡು ಹಣೆಗೆ ವಿಭೂತಿ ಧರಿಸಿ ಶುದ್ಧ ಸಸ್ಯಾಹಾರಿಗಳಾಗಿರುತ್ತಾರೆ. ಶರಣ ಸಂಪ್ರದಾಯದ ಆಚರಣೆಗಳನ್ನು ಇವರಲ್ಲಿ ಕಾಣುತ್ತೇವೆ. ಕುರುಬ ಜನಾಂಗದ ಜಂಗಮರು ತಾವೆಂದು ಇವರು ಹೇಳಿಕೊಳ್ಳುತ್ತಾರೆ. ಜನನ-ಮರಣ-ಮದುವೆ ಮುಂತಾದ ಸಂದರ್ಭಗಳಲ್ಲಿ ಪುರೋಹಿತರಾಗಿ ಒಡೆಯರು ಕೆಲಸ ಮಾಡುತ್ತಾರೆ. ಇವರಲ್ಲಿ ಪುರುಷರು ದೊರಕದಿದ್ದರೆ ಅವರ ಹೆಣ್ಣು ಮಕ್ಕಳು 'ಒಡೇರಮ್ಮ'ಳಾಗಿ ಈ

ಕೆಲಸ ಮಾಡುತ್ತಾರೆ. ಇಂಥ ಸಂಪ್ರದಾಯ ಭರತ ಖಂಡದಲ್ಲಿ ಎಲ್ಲಿಯೂ ಇಲ್ಲ ಎಂಬುದಾಗಿ ಸಂಶೋಧಕರಾದ ಡಾ. ಎಂ. ಚಿದಾನಂದಮೂರ್ತಿಯವರು ಹೇಳಿರುವುದನ್ನು ಗಮನಿಸಬೇಕು.

ಗಂಡ ಸತ್ತು ಹೋದರೆ ವಿಧವೆ ಪಟ್ಟ ಕಟ್ಟಿಕೊಂಡು ಅಮಂಗಲಕರವಾಗಿ ಈ ಒಡೇರಮ್ಮಗಳು ಉಳಿಯುವುದಿಲ್ಲ. ಬದಲಾಗಿ ಮೈಮೇಲೆ ಧರಿಸಿದ ಲಿಂಗವೇ ಪತಿಯೆಂದು ಭಾವಿಸಿ ಮತ್ತೆ ಹಿಂದಿನಂತೆ ತಾಳಿ, ಕುಂಕುಮ, ಬಳೆ, ಹೂಗಳನ್ನು ಧರಿಸುತ್ತಾ ಸದಾ ಮುತ್ತೈದೆಯಾಗಿ ಕೆಲಸ ನಿರ್ವಹಿಸುತ್ತಾರೆ. ಸಾಮಾಜಿಕವಾಗಿ ಗೌರವ ಸ್ಥಾನ ಉಳಿಸಿಕೊಂಡು ಬದುಕು ಸಾಗಿಸುತ್ತಾರೆ. ಹೀಗೆ ಶರಣ ಪರಂಪರೆಯ 'ಲಿಂಗ ಪತಿ ಶರಣ ಸತಿ' ತತ್ತ್ವ ಇವರ ಬದುಕಿನ ಆಚರಣೆಯಲ್ಲಿ ಕಾಣುತ್ತದೆ.

ಕುತೂಹಲದ ವಿಷಯವೆಂದರೆ ಲಿಂಗಾಯತ ಶರಣರ ಚಳುವಳಿಯ ಈ ಆದರ್ಶಗಳು ಈ ಒಡೆಯರ ಬದುಕಿನಲ್ಲಿ ಬಂದದ್ದು, ಈ ಒಡೆಯರು ಯಾರು? ಇವರನ್ನು 'ಸಿದ್ಧರು' ಎಂಬುದಾಗಿ ಗುರುತಿಸಲಾಗುತ್ತದೆ ಏಕೆ? ಬಹುತೇಕ ಒಡೆಯರ ಹೆಸರಿಗೆ 'ಸಿದ್ಧ'ರು ಎಂಬ ವಿಶೇಷಣವಿರುವುದು ಇನ್ನಷ್ಟು ಕುತೂಹಲಕ್ಕೆಡೆ ಮಾಡಿಕೊಡುತ್ತದೆ.

ಇಲ್ಲಿಯ ಸಿದ್ಧರು 'ಹೋಮದ ಕಂಬಳಿ, ನೇಮದ ಬೆತ್ತ', ಭಂಡಾರಭರಣಿ, ಶಿರಕಮಲ ಧರಿಸಿ, ಸುಖದ ಕೊಳಲು, ದುಃಖದ ಕೊಳಲು ಹಿಡಿದುಕೊಂಡು ಬೆಟ್ಟ ಗುಡ್ಡಗಳಲ್ಲಿ ಪಶುಸಂಗೋಪನೆಯ ಕೆಲಸ ಮಾಡುತ್ತ ತಮ್ಮ ಬದುಕನ್ನು ಸಾಗಿಸುತ್ತಾರೆ. ತಮ್ಮ ಯೋಗ ಸಾಧನೆಯಿಂದ ಅಶರೀರಿಗಳಾಗಿ ಎಲ್ಲಿ ಬೇಕೆಂದರಲ್ಲಿ ಕಾಣಿಸಿಕೊಳ್ಳುತ್ತಾರೆ. ಜಲಮಾ ಮಂತ್ರದ ನೀರು, ಹರಳು, ಬೆತ್ತ ಕಂಬಳಿಗಳಿಂದ ಲೀಲೆಗಳನ್ನು ತೋರಿಸುತ್ತಾರೆ.

ಗಿಡಮೂಲಿಕೆಗಳ ಜ್ಞಾನದಿಂದ ಭಯಂಕರ ರೋಗ ರುಜಿನಗಳನ್ನು ದೂರ ಮಾಡುತ್ತಾರೆ. ಜನ ಸಮೂಹದೊಂದಿಗೆ ಬೆರೆತು ಅವರಿಗೆ ಅಭಯ ಹಸ್ತ ನೀಡುತ್ತಾರೆ. ಮೌಢ್ಯ ಮುಖವಾಡಗಳನ್ನು ಖಂಡಿಸುತ್ತಾರೆ. ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಪೋಷಿಸುತ್ತಾರೆ. ಹೀಗಾಗಿ ಇವರು ಜನಮಾನಸದಲ್ಲಿ ದೇವತೆಗಳಾಗಿ ಪೂಜೆಗೊಳ್ಳುತ್ತಾರೆ.

ನಮ್ಮ ದೇಶದ ಪ್ರಾಚೀನ ಚರಿತ್ರೆಯಲ್ಲಿ ಇಂಥ ಸಿದ್ಧರು ಹಾಗೂ ಶೈವಸಿದ್ಧರನ್ನು ಹೆಸರಿಸಬಹುದು. ಸುಮಾರು ೫ನೆಯ ಶತಮಾನದಿಂದ ೧೨ ನೇ ಶತಮಾನದ ಅವಧಿಯಲ್ಲಿ ಇಂಥ ಸಿದ್ಧರು ಕಾಣಿಸಿಕೊಳ್ಳುತ್ತಾರೆ. ಇವರಲ್ಲಿ ಭಾರತದ ದಕ್ಷಿಣದ ತಮಿಳು ಸಿದ್ಧರ ಮೂಲ ಪುರುಷ 'ತಿರುಮೂಲರ್', ಈತನು ೬–೭ ನೆಯ ಶತಮಾನದವನಾದರೆ, ಗೋರಖನಾಥ ಸಿದ್ಧನು ೧೨ ನೇ ಶತಮಾನದವನು. ಈ ಸಿದ್ಧರನ್ನು ಅಷ್ಟಾದಶಸಿದ್ಧರೆಂದೂ, ಚೌರಾಂಸೀ ಸಿದ್ಧರೆಂದೂ, ನವಕೋಟಿ ಸಿದ್ಧರೆಂದೂ ಸಂಖ್ಯಾತ್ಮಕವಾಗಿ ಗುರುತಿಸಲಾಗುತ್ತದೆ.

"ಇವರೆಲ್ಲರ ಕಾಲ-ಕಾರ್ಯಗಳ ಕುರಿತಾಗಿ ನಿಖರವಾಗಿ ಹೇಳುವುದು ಕಷ್ಟದಾಯಕವೇ. ಈ ಸಿದ್ಧ ಪರಂಪರೆಯವರೆಲ್ಲರೂ ಅಣಿಮಾದಿಸಿದ್ಧಿ ಸಂಪನ್ನರೆಂದೂ, ಅತಿ ಮಾನವ ಶಕ್ತಿಯುಳ್ಳವರೆಂದೂ, ಇಚ್ಛಾ ಮಾತ್ರದಿಂದ ಕ್ರಿಯಾ ಸಿದ್ಧಿ ಪಡೆದವರೆಂದೂ ಹೇಳಲಾಗುತ್ತದೆ. ಯೋಗ ಸಾಧನೆಯಿಂದ ಸಾಧಕನು ಅತಿಮಾನವ ಸಿದ್ಧಿ ಪಡೆಯಬಲ್ಲ ಎಂಬುದಕ್ಕೆ ಈ ನಾಥ ಸಿದ್ಧರು ನಿದರ್ಶನವಾಗುತ್ತಾರೆ. ಹೀಗೆ ಬೆಳೆಯುತ್ತ ಅಮೂರ್ತವಾದ ಈಶ್ವರ ತತ್ತ್ವದಲ್ಲಿ ಲೀನವಾಗುವುದೇ ಸಿದ್ಧರ ಸ್ಥಿತಿ."[೩]

ಇಂಥ ಸಿದ್ಧರ ಪರಂಪರೆಯಲ್ಲೂ ಗುರೂಪದೇಶಕ್ಕೆ ತುಂಬಾ ಮಹತ್ವ ಹಾಗೂ ಅಗ್ರಸ್ಥಾನ ಕೊಡಲಾಗಿದೆ. ಸಾಧನೆಯ ಮಾರ್ಗದೊಂದಿಗೆ ಕ್ರಿಯಾತ್ಮಕವಾಗಿ ಸಮಾಜ ಮುಖಿಗಳಾಗಿ ಮೂಢನಂಬಿಕೆಗಳನ್ನು ಖಂಡಿಸುತ್ತಾರೆ. ಆದಿ ಗುರುವಿನ ಅನುಗ್ರಹದಿಂದ ಗೋರಖನಾಥ ಮೊದಲ್ಗೊಂಡು ನಾಲ್ಕು ಜನ ಸಿದ್ಧರ ಜನನವಾಗುತ್ತದೆ. ಈ ನಾಲ್ವರು ಸಿದ್ಧರು ಕೇವಲ ವಾಯುವಿನ ಸೇವನೆಯಿಂದ ಯೋಗಾಭ್ಯಾಸಕ್ಕೆ ತೊಡಗುತ್ತಾರೆ ಇವರೇ ಯೋಗಿಗಳಾಗುತ್ತಾರೆ.

### ೨.೨.೩ ಬೀರಪ್ಪ :

ಹಾಲುಮತದ ದೈವಗಳಲ್ಲಿ ಬೀರಪ್ಪನು ಅತ್ಯಂತ ಪ್ರಸಿದ್ಧ ದೇವನಾಗಿದ್ದಾನೆ. ಬೀರಪ್ಪನ ಜನನ, ಅವನು ಮಾಡಿದ ಲೀಲೆಗಳನ್ನು ಡೊಳ್ಳಿನ ಹಾಡುಗಳು ವರ್ಣಿಸುತ್ತವೆ.

ಬೀರಪ್ಪನ ಜನ್ಮ ವೃತ್ತಾಂತದ ಮೇಲೆ ರಚಿತವಾದ 'ಹಾಲ್ಮತೋತ್ತೇಜಕ ಪುರಾಣ'ದ ಪ್ರಕಾರ ಪುಷ್ಪದತ್ತನೆಂಬುವವನು ಶಿವಪೂಜೆ ಮಾಡುತ್ತಿರುವ ಸಂದರ್ಭದಲ್ಲಿ ಹರಿಯು ಶಿವನಿಗೇರಿಸಿದ್ಧ ಪುಷ್ಪವನ್ನು ಕೆಳಗೆ ಕೆಡವಿ ತಾನು ಪೂಜೆ ಮಾಡುವಾಗ ಪಾದದಲ್ಲಿ ಬಿದ್ದ ಹೂಗಳನ್ನು ಜಂಗುಗಳನ್ನಾಗಿ ಧರಿಸಿದನು. ಪುಷ್ಪದತ್ತನ ಪೂಜೆಗೆ ಭಂಗ ತಂದ ಅಪರಾಧಕ್ಕಾಗಿ ಶಿವನು ಹರಿಗೆ ಕಾಶಿಯಿಂದ ಗಂಗಾಜಲ ತಂದು ಅಭಿಷೇಕ ಮಾಡಬೇಕೆಂದು ಹೇಳಿದಾಗ ಹರಿಯು ಒಪ್ಪಿಕೊಂಡು ಚಂದ್ರಗಿರಿಯ ಅರಸು ನೀಲಾಂಕಾರ ರಾಜನ ಮಗ ಭರಮದೇವನನ್ನು ತಾನು ಮರಳಿ ಬರುವ ವರೆಗೆ ಶಿವಪೂಜೆ ಮಾಡಿಕೊಂಡಿರುವಂತೆ ಹೇಳಿ, ತನ್ನ ತಂಗಿ ಸುರಾವತಿಯನ್ನು ಕೊಟ್ಟು ಮದುವೆ ಮಾಡಿ ಗಂಗಾಜಲ ತರಲು ಹೋದನು.

ಗಂಗಾಜಲದೊಂದಿಗೆ ಹಿಂದಿರುಗಿದ ಹರಿಯನ್ನು ದ್ವಾರಪಾಲಕ ಒಳಗೆ ಬಿಡಲು ನಿರಾಕರಿಸಿದಾಗ ದ್ವಾರಪಾಲಕನನ್ನು ಧಿಕ್ಕರಿಸಿ ಒಳಗೆ ಬಂದು ನೋಡಿದಾಗ ಭರಮದೇವನು ಶಿವನ ಪೂಜೆಯಲ್ಲಿ ತಲ್ಲೀನನಾಗಿದ್ದನ್ನು ಕಂಡು ಅಸೂಯೆಗೊಂಡು ಮಕ್ಕಳಿಲ್ಲದ ಭಕ್ತನಿಂದ ಪೂಜೆಯನ್ನು ಸ್ವೀಕರಿಸುವುದು ಸರಿಯೇ ಎಂದು ಶಿವನಿಗೆ ಕೇಳಲು, ಶಿವನು ಸುರಾವತಿಯು ಶಿವನಲ್ಲಿಗೆ ಬಂದು ತನಗೆ ಮಕ್ಕಳನ್ನು ಕರುಣಿಸಬೇಕೆಂದು ಬೇಡಿಕೊಂಡಳು. ಅಗ ಶಿವನು "ಮಗಳೇ ನಿನಗೆ ಹೊನ್ನು ಹೊಕ್ಕುಳ, ಸುವರ್ಣಜಡೆ ಇರುವ ಮಗ ಹುಟ್ಟುವ"ನೆಂದು ಆಶೀರ್ವದಿಸಿ ಕಳುಹಿಸಿದನು.

ಕೆಲವುದಿನಗಳಲ್ಲಿ ಸುರಾವತಿ ಗರ್ಭವತಿಯಾದ ವಿಷಯ ಹರಿಗೆ ಗೊತ್ತಾಗಿ ನಾಳೆ ಅವಳಿಗೆ ಹುಟ್ಟುವ ಮಗನಿಗೆ ತನ್ನ ಮಗಳನ್ನು ಕೊಡಬೇಕಾಗಿ ಬರುತ್ತದೆ ಎಂದರಿತು ಗರ್ಭದಲ್ಲಿಯೇ ಅದನ್ನು ಹೊಸಕಿ ಹಾಕಬೇಕೆಂದು ಹೊಂಚು ಹಾಕಿ, ವಿಷ ಹಾಕಿದ ಅನ್ನವನ್ನು ಸುರಾವತಿಗೆ ನೀಡಲು ಬಂದಾಗ ಗರ್ಭದಲ್ಲಿರುವ ಮಗು ಈ ವಿಷಯವನ್ನು ಒಳಗಿನಿಂದಲೇ ಸೂಚನೆ ನೀಡಿ ತಾಯಿಯನ್ನು ಎಚ್ಚರಿಸುತ್ತದೆ.

ಇದರಿಂದ ಹರಿಯ ಸಂಚು ವಿಫಲವಾಗುತ್ತದೆ. ಸುರಾವತಿಯು ಕೆಲವು ತಿಂಗಳಾದ ಬಳಿಕ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಇದೇ ಸಂದರ್ಭ ಉಪಯೋಗಿಸಿಕೊಂಡು ಹರಿಯು ಜ್ಯೋತಿಷಿಯ ವೇಷದಲ್ಲಿ ಅವಳಲ್ಲಿಗೆ ಬಂದು “ಈ ಮಗು ಹುಟ್ಟಿದ ಘಳಿಗೆ ಸರಿಯಾಗಿಲ್ಲ. ಇದರಿಂದ ಈ ಮಗುವಿನ ಸೋದರ ಮಾವನಿಗೆ ಮೃತ್ಯು ಬರುವುದು ತಪ್ಪಿದ್ದಲ್ಲ. ಇದಕ್ಕೆ ಪರಿಹಾರವೆಂದರೆ ಈ ಮಗುವನ್ನು ಕಾಡಿನಲ್ಲಿ ಬಿಟ್ಟು ಬರಬೇಕು” ಎಂದು ಸಲಹೆ ನೀಡುತ್ತಾನೆ. ಸುರಾವತಿಯು ದುಃಖಭರಿತಳಾಗಿ ಪರಿಚಾರಕರನ್ನು ಕರೆದು ಮಗುವನ್ನು ಕಾಡಿಗೆ ಬಿಟ್ಟು ಬರಲು ತಿಳಿಸುತ್ತಾಳೆ. ಆಗ ಅವರು ಮಗುವನ್ನು ತೊಟ್ಟಿಲಲ್ಲಿ ಹಾಕಿ ಹೊತ್ತುಕೊಂಡು ‘ಕೂದಲಿ’ ವನದ ‘ಹಾಲಹೇವಲಿ’ (ಇದು ಬೆಳಗಾವ ಜಿಲ್ಲೆಯ ರಾಯಬಾಗ ತಾಲೂಕಿನ ಚಿಂಚಲಿ ಎಂಬಲ್ಲಿ ಇದೆ.) ಹಳ್ಳದ ದಂಡೆಯ ಮೇಲೆ ತೊಟ್ಟಿಲನ್ನು ಇಳುಹಿ ನೀರು ಕುಡಿಯುತ್ತಿರುವಾಗ ಶಿವನ ಮಹಿಮೆಯಿಂದ ತೊಟ್ಟಿಲು ಆಲದ ಮರದ ಮೇಲೆ ಹೋಗಿ ಕೂಡುತ್ತದೆ. ನೀರು ಕುಡಿದು ಮರಳಿದ ಪರಿಚಾರಕರು ತೊಟ್ಟಿಲು ಮಾಯವಾಗಿರುವುದನ್ನು ಕಂಡು ಗಾಬರಿಯಾಗುತ್ತಾರೆ. ಹುಡುಕುವಾಗ ಅವರೆಲ್ಲರೂ ರಕ್ತಕಾರಿ ಸಾಯುತ್ತಾರೆ. ಶಿವನೊಂದಿಗೆ ಬಂದಿದ್ದ ಪಾರ್ವತಿಯು ಮಗುವಿಗೆ “ಶಿವಸಿದ್ಧಬೀರ” ಎಂದು ಹೆಸರಿಡುತ್ತಾಳೆ.

ಇತ್ತ ಚಾಮರಾಯ ಮತ್ತು ಶಾಂಭವಿಯ ಸಾಕು ಮಕ್ಕಳಾಧ ಲಕ್ಷ್ಮಮ್ಮ, ಮಾಯಮ್ಮ, ಮಂಕಮ್ಮ, ಮಾಕಾಳೆಮ್ಮ, ಅಕ್ಕಮ್ಮ, ಇವರು ಒಂದು ದಿನ ಕುರಿ ಕಾಯುತ್ತ ‘ಹಾಲ ಹೇವಲಿ’ ಹಳ್ಳಕ್ಕೆ ಬಂದಾಗ ಮರದ ಮೇಲೆ ಕೂಸಿನ ಅಳುವನ್ನು ಕೇಳಿ ಅಕ್ಕ–ತಂಗಿಯರು ಆ ಮಗು ನನಗೆ ಬೇಕು! ತನಗೆ ಬೇಕು! ಎಂದು ವಾಗ್ವಾದಕ್ಕೆ ಇಳಿಯುತ್ತಾರೆ. ಕೊನೆಯವಳಾದ ಅಕ್ಕಮ್ಮ ಒಂದು ಸಲಹೆಯನ್ನು ಮುಂದಿಡುತ್ತಾಳೆ. “ನಾವು ಐವರೂ ಮರದ ಕೆಳಗೆ ಉಡಿಯೊಡ್ಡಿ ನಿಲ್ಲೋಣ. ಆ ಮಗು ಯಾರ ಉಡಿಯಲ್ಲಿ ಬಂದು ಬೀಳುತ್ತದೆಯೋ ಅವರು ಅದನ್ನು ಸಾಕೋಣ” ಎಂದಾಗ ಇದಕ್ಕೆ ಎಲ್ಲರೂ ಒಪ್ಪಿ ಉಡಿ ಒಡ್ಡಿ ನಿಲ್ಲುತ್ತಾರೆ. ಆ ಸಮಯದಲ್ಲಿ ಮಗು ಅಕ್ಕಮ್ಮಳ ಉಡಿಯಲ್ಲಿ ಬೀಳುತ್ತದೆ. ಅಂದಿನಿಂದ ಶಿವಸಿದ್ಧ ಬೀರಪ್ಪನ ಸಂರಕ್ಷಣೆಗೆ ಅಕ್ಕಮ್ಮನೇ ಜವಾಬ್ದಾರಳಾಗುತ್ತಾಳೆ. (ಕೆಲವು ಕಥೆಗಳಲ್ಲಿ ಮಾಯಮ್ಮ ಎಂದಿದೆ).

ಬೀರಪ್ಪನ ಹುಟ್ಟಿನ ಬಗ್ಗೆ ಡಾ. ವೀರಣ್ಣ ದಂಡೆಯವರ ಸಂಪಾದನೆಯ ರಸ್ತಾಮರದ ಭೀಮಕವಿ. ‘ಜನಪದ ಹಾಲುಮತ ಕಾವ್ಯ’ ಹೆಚ್ಚು ಕಡಿಮೆ ಇದನ್ನೇ ಹೇಳುತ್ತದೆ. ಆದರೆ ಮಹಾಕಾವ್ಯದಲ್ಲಿ ಬೀರಪ್ಪನ ಮಾವನ ಹೆಸರು ಕಾಳಿನಾರಾಯಣ, ಬೀರಪ್ಪನನ್ನು ಸಾಕಿದವಳು ಮಾಯಮ್ಮ (ಚಿಂಚಲಿ–ಹುಣಸೆ) ಎಂದಿದೆ. ಇನ್ನೊಂದು ಕಥೆಯ ಪ್ರಕಾರ ವೀರಭದ್ರನೇ ಸುರಾದೇವಿಯ ಗರ್ಭದಲ್ಲಿ ಜನಿಸುತ್ತಾನೆ.

ಕೊಣ್ಣೂರ ಕರಿಸಿದ್ಧೇಶ್ವರನನ್ನು ಕುರಿತಾಗಿ ರಚನೆಗೊಂಡ ಸ್ಥಳ ಪುರಾಣದಲ್ಲಿ ಬೀರಪ್ಪನ ಬಗೆಗಿರುವ ಕಥೆ ಹೀಗಿದೆ;

ಒಂದಾನೊಂದು ಕಾಲದಲ್ಲಿ ಶಿವನಿಗೆ ಪಟ್ಟಗಟ್ಟುವಾಗ (ರಾಜ್ಯಾಭಿಷೇಕ) ಗುಗ್ಗುಳ ಹೋಮ ಮಾಡುತ್ತಿರುವಾಗ ಹೋಮ ಕುಂಡದಲ್ಲಿ ಒಂದು ಮಗು ಜನಿಸುತ್ತದೆ. ಈ ಮಗು ಸಮುದ್ರದ ದಂಡೆಯಲ್ಲಿ ಕುಳಿತು ಸೃಷ್ಟಿಯೊಳಗಿರುವ ಸಕಲ ಪ್ರಾಣಿಗಳಿಗೆಲ್ಲ ಆಹಾರವನ್ನು ಬೀರುತ್ತಿರುತ್ತದೆ. ಈ ಕಾರಣದಿಂದಲೇ ಆ ಮಗುವಿಗೆ ಬೀರಪ್ಪನೆಂದು ಹೆಸರು ಪ್ರಾಪ್ತವಾಗುವ ಸಂದರ್ಭದಲ್ಲಿ ಪರಶಿವನು ಪಾರ್ವತಿಯ ಹಾಲಿನಲ್ಲಿ ಹುಟ್ಟಿದ ನಾರಾಯಣನ ತಂಗಿ ಸುರಾವತಿಯೊಂದಿಗೆ ಬರಮದೇವರ ಮದುವೆ ಮಾಡಿದನು ಎಂಬ ಉಲ್ಲೇಖವಿದೆ. ಒಟ್ಟಾರೆ ಬೀರಪ್ಪನಿಗೆ ಸಂಬಂಧಿಸಿದ ಚರಿತ್ರೆ, ಪುರಾಣ ಹಾಗೂ ಜಾನಪದ ಕಥೆಗಳು ಮಹಾಭಾರತದ ಶ್ರೀಕೃಷ್ಣನ ಜನನದ ಜಾಡಿನಲ್ಲಿ ಹುಟ್ಟಿಕೊಂಡಿವೆ ಎಂದು ತಿಳಿದು ಬರುತ್ತದೆ. ಬೀರಪ್ಪನು ಕುರುಬರಲ್ಲಿ ಎಷ್ಟು ಪ್ರಾಚೀನನೋ ಅಷ್ಟೆ ಪ್ರಸಿದ್ಧನೂ ಹೌದು. ಬೀರಪ್ಪನ ರೂಪ ಪರಿವರ್ತನೆಯು ವಿಠ್ಠಲ, ವೆಂಕಟೇಶ, ವೀರಭದ್ರ, ವಿರೂಪಾಕ್ಷ, ಪುರಿಜಗನ್ನಾಥ ಮುಂತಾದ ಪ್ರಸಿದ್ಧ ದೇವತೆಯ ರೂಪದಲ್ಲಿ ಆಗಿರುವುದು ಕಂಡು ಬರುತ್ತದೆ.

ಇಲ್ಲಿ ಬೀರದೇವರ ಕುರಿತು ಕವಿ ಕನಕದಾಸರು ತಮ್ಮ ಪದ್ಯದಲ್ಲಿ ಹೀಗೆ ಹೇಳಿದ್ದಾರೆ.

**"ನಾವು ಕುರುಬರು ನಮ್ಮ ದೇವರು ಬೀರಯ್ಯ**
**ಕಾವ ನಮ್ಮಜ್ಜ ನರಕುರಿಯ ಹಿಂಡುಗಳ"**

ಬಹುದೇವೋಪಾಸನೆಯನ್ನು ತಡೆಯುವ ಸಂಕಲ್ಪದೊಂದಿಗೆ ಬೌದ್ಧ, ಜೈನ, ಕ್ರೈಸ್ತ ಮುಂತಾದ ಧರ್ಮಗಳು ಉದಯವಾದವು. ಬಹು ದೇವೋಪಾಸನೆಗೆ ಬೇಸತ್ತ ಹಿಂದೂಗಳು ಧರ್ಮ ಬದಲಾವಣೆಯತ್ತ ವಾಲಿದರು. ಇದನ್ನು ತಡೆಯುವ ಉದ್ದೇಶದಿಂದ ಎಲ್ಲ ಕ್ಷುದ್ರ ದೇವತೆಗಳನ್ನು ಒಂದುಗೂಡಿಸಿ ಬಹಳ ದಿನದಿಂದ ಪೂಜಿಸುತ್ತಿದ್ದ ಮೈಲಾರನ ಸ್ಥಾನದಲ್ಲಿ ಹೊಸ ವೀರಪ್ಪನನ್ನು ಸೃಷ್ಟಿಸಿದರು. ಕಾಲಾಂತರದಲ್ಲಿ ವೀರಪ್ಪನೇ ಬೀರಪ್ಪನಾಗಿ ರೂಪಾಂತರಗೊಂಡನೆಂದು ಒಂದು ಐತಿಹ್ಯವಿದೆ. ಬೀರಪ್ಪನ ಪ್ರಚಾರದ ಉಪಯೋಗ ಈ ರೀತಿಯಲ್ಲಿ ಬಳಸಿಕೊಂಡಿರುವ ಸಾಧ್ಯತೆಯೂ ಇಲ್ಲಿ ಇರಬಹುದು. ಇಂದು ಪ್ರತಿಯೊಂದು ಹಟ್ಟಿ, ಗ್ರಾಮಗಳಲ್ಲಿ ಬೀರಪ್ಪನ ಮಂದಿರಗಳು ಕಾಣಸಿಗುತ್ತವೆ.

ಬೀರ ದೇವರ ಚರಿತ್ರೆಗೆ ಸಂಬಂಧಿಸಿದಂತೆ ಬಸವಣ್ಣನವರು ಹೇಳಿದ ವಚನದಲ್ಲಿ

**ಮಾರಯ್ಯ ಬೀರಯ್ಯ ಖೇಚರಗಾವಿಲ ಅಂತರ ಬೆಂತರ**
**ಕಾಳಯ್ಯ ಮಾಳಯ್ಯ ಕೇತಯ್ಯಗಳೆಂಬ ನೂರು ಮಡಿಕೆಗೆ**
**ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದೆ ದಡಿ ಸಾಲದೆ?"**

ಎಂದು ಹೇಳಿರುವಾಗ ಬೀರಪ್ಪನ ಕಲ್ಪನೆ ಬಸವಣ್ಣನವರಿಗಿಂತಲೂ ಪ್ರಾಚೀನನೆಂದು ತಿಳಿದು ಬರುತ್ತದೆ. ಗ್ರಾಮೀಣ ಭಾಗದಲ್ಲಿ ಒಂದು ನಾಣ್ನುಡಿ ಪ್ರಚಲಿತವಿದೆ.

‘ಆಡು ಕಾಯಲು ಹೋದ ಬೀರಣ್ಣ
ನಾಡು ನೋಡಲು ಹೋದ ವೀರಣ್ಣ’

ಬೀರಣ್ಣ ಕುರಿ ಕಾಯುತ್ತ ಹಳ್ಳಿಗಾಡಿನಲ್ಲಿ ಉಳಿದುಕೊಂಡ. ಪಟ್ಟಣ ವಾಸಿಗಳಾದ ಕುರುಬರು ತಮ್ಮ ಬೀರಪ್ಪನನ್ನು ವೀರಣ್ಣ (ವೀರಭದ್ರ) ನನ್ನಾಗಿ ಮಾಡಿದ್ದು ಬಸವಣ್ಣನ ಪೂರ್ವದಲ್ಲಿಯೇ.

“ಮಹಾರಾಷ್ಟ್ರದಲ್ಲಿ ಕ್ರಿ. ಶ. ೪ ನೆಯ ಶತಮಾನದಲ್ಲಿಯೇ ಖಂಡೋಬಾ ಮತ್ತು ಬೀರೋಬಾ ಆರಾಧನೆಗೊಳ್ಳುತ್ತಿರುವ ಬಗ್ಗೆ ದಾಖಲೆಗಳಿವೆ. ಜೊತೆಗೆ ಕಾಲೀ(ಳಿ) ಅಮ್ಮಾ, ಮಾರಿ ಅಮ್ಮಾ ಮುಂತಾದ ಗ್ರಾಮದ ದೇವತೆಗಳೂ ಇದ್ದರು. ಆದರೆ ಕುರುಬರ ಇತ್ತೀಚಿನ ಡೊಳ್ಳಿನ ಹಾಡುಗಳಲ್ಲಿ ಹಾಗೂ ಜನಪದ ಕಥೆಗಳಲ್ಲಿ ಗುರು ರೇವಣಸಿದ್ಧರ ಶಿಷ್ಯ ಬೀರಪ್ಪ ಎನ್ನುವ ರೀತಿಯಲ್ಲಿ ಕಥೆ ಸೃಷ್ಟಿಯಾಗಿರುವದತ್ತ ಗಮನ ಹರಿಸಿದರೆ ಕಥೆ–ಪುರಾಣ ರಚನೆಕಾರರಿಗೆ ಇತಿಹಾಸದ ತಿಳವಳಿಕೆ ಇಲ್ಲದಿರುವುದು ಎದ್ದು ಕಾಣುತ್ತದೆ. ಇಲ್ಲವೆ ರೇವಣಸಿದ್ಧರ ಶಿಷ್ಯ ಎಂದು ಕರೆಯಲ್ಪಡುವ ಬೀರಪ್ಪನು ಅಭಿನವ ಬೀರಪ್ಪನಾಗಿರಬೇಕು. ಮಾಳಿಂಗರಾಯ, ಕರಿಸಿದ್ಧೇಶ್ವರ ಪದ್ಮಗೊಂಡ ಮುಂತಾದವರ ಪುರಾಣಗಳಲ್ಲಿ ಇವನನ್ನು ಹುನ್ನೂರ ಬೀರಪ್ಪನೆಂತಲೂ, ಕೊಣ್ಣೂರ ಬೀರಪ್ಪ (ಕರಿಸಿದ್ಧ) ನೆಂತಲೂ ಹಾಗೂ ಸಿದ್ಧಬೀರಪ್ಪನೆಂತಲೂ ಹೇಳಲಾಗಿದೆ. ರೇವಣಸಿದ್ಧರ ಕಾಲಮಾನ ೧೨ ನೇ ಶತಮಾನವೆಂದು ಶಿಲಾಶಾಸನಗಳಿಂದ ಸಿದ್ಧವಾಗಿದೆ.”*

ಇವನು ಬಿಜ್ಜಳ, ರಾಜೇಂದ್ರ ಜೋಳ, ಬಸವಣ್ಣ, ಸಿದ್ಧರಾಮ, ಮುಂತಾದವರ ಸಮಕಾಲೀನನಾಗಿದ್ದರಿಂದ ರೇವಣಸಿದ್ಧ ೧೨ ನೇ ಶತಮಾನದಲ್ಲಿ ಬದುಕಿದ್ದ ಕಾಲಮಾನದ ಬಗ್ಗೆ ಯಾವುದೇ ವಿವಾದ ಕಂಡು ಬರುವುದಿಲ್ಲ. ಮಹಾರಾಷ್ಟ್ರದ ಖಂಡೋಬಾ ಹಾಗೂ ಬೀರಪ್ಪರು ೪ ನೆಯ ಶತಮಾನದಿಂದಲೂ ಆ ಪ್ರದೇಶದಲ್ಲಿ ಪೂಜೆಗೊಳ್ಳುತ್ತಿರುವುದರಿಂದ ೪ ನೆಯ ಶತಮಾನದಕ್ಕಿಂತಲೂ ಹಿಂದೆ ಸುಮಾರು ೨–೩ ನೆಯ ಶತಮಾನದವೆಂದು, ಬೀರಪ್ಪನ ಅಸ್ತಿತ್ವ ಇರಬಹುದು.

೧೨ನೆಯ ಶತಮಾನದ ಗುರುವಿಗೆ ೧೨ ನೇ ಶತಮಾನದ ಶಿಷ್ಯನಿರುವುದು ಉಚಿತವಾದದ್ದು ಎಲ್ಲಿಯೋ ಇದ್ದ ಬೀರಪ್ಪನನ್ನು ರೇವಣಸಿದ್ಧರ ಶಿಷ್ಯನೆಂದು ತಳುಕು ಹಾಕುವುದು ಉಚಿತವೆನಿಸಲಾರದು.

ವೀರಭದ್ರನ ಬಗ್ಗೆ ರಚಿಸಲ್ಪಟ್ಟಿರುವ ಪುರಾಣಗಳು ಸು. ೨–೪ನೆಯ ಶತಮಾನದಲ್ಲಿ ರಚಿತವಾಗಿರುವ ಸಾಧ್ಯತೆಯುಂಟು. ಬೀರಪ್ಪನೇ ವೀರಭದ್ರನಾಗಿದ್ದರಿಂದ ಬೀರಪ್ಪನ ಕಾಲಮಾನ ಯಾವ ಕಾಲಕ್ಕೂ ಕ್ರಿಸ್ತನ ನಂತರ ಬರಲಿಕ್ಕೆ ಸಾಧ್ಯವೇ ಇಲ್ಲ. ವೇದಗಳಲ್ಲಿ ರುದ್ರಿಯರ ಪ್ರಸ್ತಾಪ ಬಂದಿರುವುದರಿಂದ ಈ ಕಾಲಮಾನ ಸಾವಿರಾರು ವರ್ಷ ಹಿಂದೆ ಸರಿಯುತ್ತದೆ.

“ರುದ್ರಿಯರು ಭಾರತದ ಮೂಲ ಪಶುಪಾಲಕರು. ಜಡೆಸಿದ್ಧರೇ ರುದ್ರಿಯರು. ಆರ್ಯರಿಗೂ ಭಾರತೀಯ ಮೂಲದ ಜಡೆಸಿದ್ಧರಿಗೂ ವಿವಾದ ಪ್ರಾರಂಭವಾಗಿದ್ದು ಇವರ ಅಕ್ರಾಳ ವಿಕ್ರಾಳ ತಲೆಕೂದಲು

ಮತ್ತು ಗಡ್ಡ–ಮೀಸೆ ಮತ್ತು ಜಡೆಯ ವಿರೋಧಿಗಳಾಗಿರಲಿಲ್ಲ. ಇವರ ಕಾಲಕ್ಕೆ ರಚಿಸಲ್ಪಟ್ಟ ರಾಮಾಯಣ ಹಾಗೂ ಮಹಾಭಾರತದಂತಹ ಮಹಾಕಾವ್ಯಗಳಲ್ಲಿ ಬರುವ ನಾಯಕರಿಗೆ ಗಡ್ಡ–ಮೀಸೆಗಳಿರಲಿಲ್ಲ. ಆರ್ಯರ ಇಂದ್ರನಿಗೆ ಗಡ್ಡ–ಮೀಸೆಗಳಿರಲಿಲ್ಲ ಹಾಗೂ ತಲೆಗೆ ಜಡೆಯಿರಲಿಲ್ಲ. ಗಡ್ಡ–ಮೀಸೆ ಬಿಟ್ಟವರು ಖಳನಾಯಕರಾಗಿ ಈ ಕಾವ್ಯಗಳಲ್ಲಿ ಚಿತ್ರಿತಗೊಂಡಿದ್ದನ್ನು ಗಮನಿಸಬೇಕು."

ಬೀರಪ್ಪನು ಪಾರ್ವತಿಯ ಬೇವರಿನ ಪುತ್ರ, ಸರಸ್ವತಿಯ ಕುಮಾರ, ನಾರಾಯಣನ ಅಳಿಯ ಎಂದು ಜನಪದಗಳಲ್ಲಿ ವ್ಯಕ್ತವಾಗಿರುವುದರಿಂದ ಇವನು ಶಿವ–ಪಾರ್ವತಿ (ಶಕ್ತಿ) ಬ್ರಹ್ಮ–ಸರಸ್ವತಿ–ನಾರಾಯಣ ಮುಂತಾದ ದೈವಾನುಗ್ರಹ ಪಡೆದ ಕುಮಾರನಾಗಿರುವದನ್ನು ಒಪ್ಪಲೇಬೇಕಾಗುತ್ತದೆ. ಬೀರಪ್ಪ ಬ್ರಹ್ಮನಿಗೆ ಸಮಾನ ಎಂದು ಡೊಳ್ಳಿನ ಹಾಡುಗಳಲ್ಲಿ ಹಾಡಲಾಗುತ್ತದೆ.

**ಬ್ರಹ್ಮ ದೊಡ್ಡಾಂವ ಬ್ರಹ್ಮ ದೊಡ್ಡಾಂವss**
**ಬೀರ ದೊಡ್ಡಾಂವ ಬೀರಪ್ಪ ದೊಡ್ಡಾಂವss**

ಕುರುಬರ ಮೂಲ ಪುರುಷನೆಂದು ಹೇಳಲ್ಪಡುವ ಪದ್ಮಗೊಂಡನು ಕುರಿ ಕಾಯುವಾಗ ಅವನ ರಕ್ಷಣೆಗೆ ಶಿವನು ಬೀರಪ್ಪನನ್ನು ಕಳುಹಿಸಿದ ಬಗ್ಗೆ ಡೊಳ್ಳಿನ ಹಾಡುಗಳಲ್ಲಿ ಹಾಡಲಾಗುತ್ತದೆ.

ಇದರಿಂದಾಗಿ ಕುರುಬರು ವಾಸಿಸುವ ಪ್ರತ್ಯೇಕ ಗ್ರಾಮಗಳಲ್ಲಿ ಬೀರಪ್ಪನ ಗುಡಿಗಳಿರುವುದು ಸಾಮಾನ್ಯ. ಪಶು ಪಾಲಕರು ತಮ್ಮ ಗ್ರಹಿಕೆಯ ಆಚೆ ಅಲೌಕಿಕ ಶಕ್ತಿ ಇರುವುದನ್ನು ಮನಗಂಡು ಅದನ್ನು 'ಪರ–ಮ' ಎಂದು ಕರೆದರು. ಇದು ಮುಂದೆ ಬರಮ–ಭರಮ ಬ್ರಹ್ಮವಾಗಿ ರೂಪುಗೊಂಡಿತು. ಕಾಲಾಂತರದಲ್ಲಿ ಬ್ರಹ್ಮನ ಆರಾಧನೆ ನಿಂತಾಗ ಇವನ ಪಕ್ಕದಲ್ಲಿಯೇ ಬೀರಪ್ಪನ ಗುಡಿಗಳನ್ನು ಕಟ್ಟಿದರು. ಆದ್ದರಿಂದ ಪುರಾಣ ಸೃಷ್ಟಿಯ ಕಾಲದಲ್ಲಿ ಬ್ರಹ್ಮನೇ ಬೀರಪ್ಪನಾಗಿ ಕುರುಬರ ದೈವನಾಗಿದ್ದೂ ಕಂಡು ಬರುತ್ತದೆ.

ಮೇಲಿನ ಕಥೆಗಳಲ್ಲಿ ಬೀರಪ್ಪನನ್ನು ಸಾಕಲು ಐದು ಜನ ಸಹೋದರಿಯರು ಮುಂದೆ ಬರುವ ಸನ್ನಿವೇಶ ಷಣ್ಮುಖ (ಸ್ಕಂದ, ಕುಮಾರ) ನ ಜನನದ ಕಥೆಯನ್ನು ಹೋಲುವಂತಿದೆ. ಸ್ಕಂದನು ಏಳು ತಾಯಂದಿರ ಪುತ್ರನೆಂಬ ಐತಿಹ್ಯವಿದೆ. (ಏಕತ್ರ ಕುಟುಂಬ ಮತ್ತು ಮಾತೃ ಪ್ರಧಾನ ಕುಟುಂಬದಲ್ಲಿ ಜನಿಸಿದ್ದು ಕಂಡು ಬರುತ್ತದೆ) ಸಪ್ತ ಮಾತೃಕೆಯರನ್ನು ಸಾರ್ವತ್ರಿಕವಾಗಿ ಪೂಜಿಸುವ ಕಾಲವೊಂದಿತ್ತು ಎಂಬುದನ್ನು ಪ್ರಾಚೀನ ದೇವಾಲಯಗಳಲ್ಲಿ ದೊರೆಯುವ ಸಪ್ತ ಮಾತೃಕೆಯರ ಶಿಲ್ಪಗಳಿಂದ ಸಿದ್ಧವಾಗುತ್ತದೆ.

"ಹೀಗಾಗಿ ಬೀರಪ್ಪನ ಜಾನಪದ ಕಥೆಗಳಲ್ಲಿ ಬರುವ ಕುಮಾರನ ಜನನದಲ್ಲಿ ಶ್ರೀಕೃಷ್ಣನ ಸೋದರಮಾವನ ಹಗೆ ಮತ್ತು ವಧೆ, ಮಾವನ ಮಗಳನ್ನೇ ಮದುವೆಯಾಗುವ ಹಠ ಮುಂತಾದ ಸಂದರ್ಭಗಳು ಇವನ ಕಥೆಯಲ್ಲಿ ಮರುಕಳುಸಿವೆ. ಮಹಾರಾಷ್ಟ್ರದಲ್ಲಿ ಬೀರಪ್ಪ ಹಾಗೂ ವಿಠ್ಠಲನ

ಸಂಯುಕ್ತ ದೇವಾಲಯಗಳು ಇವೆ. ವಿಠ್ಠಲ ಶ್ರೀಕೃಷ್ಣನ ಅವತಾರವೆಂಬ ನಂಬಿಕೆ ಮುಂತಾದ ಸಂಗತಿಯಿಂದ ವಿಠ್ಠಲ–ಬೀರಪ್ಪ–ಶ್ರೀಕೃಷ್ಣ–ವೀರಬದ್ರ–ವೆಂಕಟೇಶ–ಬ್ರಹ್ಮ ಇವರೆಲ್ಲರೂ ಒಂದಿಲ್ಲೊಂದು ರೀತಿಯಲ್ಲಿ ಸಾಮ್ಯತೆ ಹೊಂದಿದವರಾಗಿರುದರಿಂದ ಅವರೆಲ್ಲರೂ ಅಭಿನ್ನರು ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ."[೨]

ಹುಣ್ಣಿಮೆಯ ಬೀರಪ್ಪನಂತೆ ಅಮವಾಸ್ಯೆಯ ಬೀರಪ್ಪನೂ ಇದ್ದಾನೆ. ಸೂರ್ಯನು ಬೀರ ಮತ್ತು ಡುಮಯಿಝಗೆ ನೆರವಾದನೆಂದು ಅವನು ಇನನ್ನಾ (ಚಂದ್ರ) ದೇವಿಯ ಸಹೋದರ ಎಂಬಂತೆ ಸುಮೇರಿನಲ್ಲಿ ಕಥೆ ಇದೆ.

ಬೀರಪ್ಪನು ಸೂರಾದೇವಿಯ ಮಗನೆಂಬ ಕಥೆ ಅರ್ವಾಚೀನದ್ದು, ಸೂರ್ಯನು ಚಂದ್ರನಾದುದು ಕ್ರಿ. ಪೂ. ೧೫೦೦ರ ಸುಮಾರಿಗೆ ಎಂದು ಈಜಿಪ್ತನ ಉಲ್ಲೇಖಗಳು ಸಾರುತ್ತವೆ. ವಾಸ್ತವದಲ್ಲಿ ಆದಿತ್ಯ ಎಂದರೆ ಚಂದ್ರ. ಆದರೆ ಮುಂದೆ ಈ ಸ್ಥಾನವನ್ನು ರವಿ(ಸೂರ್ಯ) ಬಂದುದರಿಂದ ಚಂದ್ರನನ್ನು ಸೋಮವಾರಕ್ಕೆ ಸ್ಥಳಾಂತರಿಸಬೇಕಾಯಿತು ಎಂದು ಚಂದ್ರಕಾಂತ ಬಿಜ್ಜರಗಿಯವರ 'ಕುರುಬರ ಹೆಜ್ಜೆಗಳು ಒಂದು ಅಧ್ಯಯನ'ದಲ್ಲಿ ಉಲ್ಲೇಖಿಸಲ್ಪಟ್ಟಿದೆ, ಇದರಲ್ಲಿ ಬೀರದೇವರ ಚರಿತ್ರೆ ಹೃದಯಂಗಮವಾಗಿ ಮೂಡಿಬಂದಿದೆ. ಬೀರಪ್ಪನ ದೇವಸ್ಥಾನಗಳು ನಮ್ಮ ತಾಲೂಕಿನಲ್ಲಿ ಹಾರೂಗೇರಿ, ರಾಯಬಾಗ, ಹಿಡಕಲ್ಲ ಮುಂತಾದ ಗ್ರಾಮಗಳಿಲ್ಲಿವೆ.

### ೨.೨.೪ ಅಲಕನೂರಿನ ಶ್ರೀ ಕರೆಸಿದ್ಧೇಶ್ವರ :

ಬಾಗಿಯ ಭಗನಾಥ ಈ ಬಾಗಿನಾಡಿನವನೇ ಆಗಿರಬೇಕು.[೬] ಏಳು ಬಾಗಿಲುಗಳ ದೇಗುಲದೊಳಗಿದ್ದ ದೈತ್ಯ ಭಗನಾಥನ ಶಿರವನ್ನು ಹರಿದು ಬಿಸುಡಿ, ಅಕ್ಕ ಮಾಯವ್ವನ ಮಾನವನ್ನು ಚಿಕ್ಕ ಬೀರಣ್ಣ ರಕ್ಷಿಸಿದನಂತೆ, ಕೊಂಕಣ ನಾಡಿಗೆ ತಲೆಬಾಗಿಲನಂತಿರುವ 'ಬಾಗೆನಾಡು' ಬೀರಣ್ಣದೇವರ ಆಟದ ಮೈದಾನವಾಗಿದೆ.

"ಬೀರಣ್ಣದೇವರು ಹಾಲುಮತದವರ ಮಹಾದೈವ. ಪಶುಪಾಲಕರಾದ ಹಾಲುಮತದವರು ಮೂಲತಃ ಅಲೆಮಾರಿಗಳು. ತಾವು ನೆಲೆಸಿದ್ದ ಜಾಗಗಳಲ್ಲಿ ಮಹಾದೈವ ಬೀರಪ್ಪನನ್ನು ಸಹಜ ಶಿಲೆಗಳಲ್ಲಿ ಭಾವಿಸಿಕೊಂಡು ಆರಾಧಿಸಿದರು. ಅವರ ಅಮೂರ್ತ ನಿರ್ವಿಕಲ್ಪಭಾವಕ್ಕೆ ನಿರ್ದಿಷ್ಟಗಾತ್ರ, ಆಕಾರ, ಅವಯವಗಳಲ್ಲದ ಇಂಥ ಕಲ್ಲು ಗುಂಡುಗಳೇ ಸಾಕ್ಷಿ ಆದ್ದರಿಂದಲೇ ಅವರ ದೈವ ಪೂಜೆ, ಭಕ್ತಿ, ಬದುಕು, ಎಲ್ಲವೂ ಸರಳ ಮತ್ತು ನಿಸರ್ಗ ಸಹಜ. ಹಾಲುಮತದವರ ಹಲವಾರು ಶ್ರದ್ಧಾ ಕ್ಷೇತ್ರಗಳು ತಾಲೂಕಿನುದ್ದಕ್ಕೂ ಹರಡಿಕೊಂಡಿವೆ. ಇವುಗಳಲ್ಲಿ ಮಾಯಕ್ಕನ ಚಿಂಚಲಿ ಮತ್ತು ಕರೆಸಿದ್ಧನ ಅಲಕನೂರು ಗಮನಾರ್ಹವಾದವು."[೮]

ಅಲಕ್‌ನೆಂಬುದ ಮಂತ್ರವು ನೋಡೋ ಆದಿಸಿದ್ಧನ ನುಡಿದವನೊ
ಆದಿಸಿದ್ಧನ ನುಡಿದವನಯ್ಯ ಸಾಧು ಶಿರೋಮಣಿಯಾದವನು
ಅರಿವು ವರವಿಗೆ ಆಧಾರವಾಗಿ ಅಲಕ್ ನಿರಂಜನ ನಿದ್ದವನೊ
ಅಲಕ್ ನಿರಂಜನ ಸದ್ಗುರು ಸಿದ್ಧಾ ಅನಂತ ಅವತಾರ ತಾಳಿದನೊ
ಅವತಾರ ತಾಳಿದ ಭಕ್ತರ ಸಲುವಾಗಿ ಆತನೆ ತಾ ಪರಶಿವನೊ
ಅಟ್ರಾಪಗಡಿ ಜಾತಿಯವರೆಲ್ಲಾ ಆತನ ಭಕ್ತರು ಹೌದನೊ
ಬಲ್ಲದೇವನೇ ಕಲ್ಲಿನ ರೂಪಾಗಿ ಗೊಲ್ಲಾಳಗೊಲಿದವ ತಾನೇನೊ
ಗೊಲ್ಲಾಳಗೊಲಿದಾ ಸಿದ್ಧಲಿಂಗನೆ ಇಲ್ಲಿಯ ಸ್ಥಳದೊಳು ನೆಲೆಸಿದನೊ
ನೆಲೆಸಿದ ಮೇಲೆ ನೆರೆಹೊರಿ ಭಕ್ತರು ನೆರೆಯುನು ಕಟ್ಟಿ ಊರವನೊ
ಕಟ್ಟಿದ ಊರಿಗೆ ಇಟ್ಟರು ಮುಂದೆ 'ಅಲಕನೂರ' ನಾಮವನೊ

ಈ ರೀತಿಯಲ್ಲಿ ಅಲಕನೂರ ಕರೆಸಿದ್ಧೇಶ್ವರನ ನಾಮ–ಮಹಿಮೆ ಮತ್ತು ಊರಿಗೆ ಹೆಸರು ಬರಲು ಕಾರಣ ಮುಂತಾದವುಗಳನ್ನು ಈ ಡೊಳ್ಳಿನ ಹಾಡಿನಲ್ಲಿ ಕವಿ ಅಲಭೈರಿ ಹೊಸೆದಿರುವನು.

"ಕರೆಸಿದ್ಧನ 'ಅರಮನೆ' ಎಂದು ಗುರುತಿಸಲ್ಪಡುವ ಅಲಕನೂರು, ಹಾರೂಗೇರಿ, ಚಿಂಚಲಿ ರಸ್ತೆಯ ಮೇಲಿರುವ ಸಣ್ಣ ಊರು. ಇದು ಹಾರೂಗೇರಿಯಿಂದ ಪಶ್ಚಿಮಕ್ಕೆ ೫ ಕಿಲೋ. ಮೀಟರ್ ಅಂತರದಲ್ಲಿದೆ. ಎತ್ತರವಾದ ಬಯಲು ಪ್ರದೇಶದಲ್ಲಿರುವ ಅಲಕನೂರ ಅಷ್ಟೇನು ಪ್ರಾಚೀನವಾದುದಲ್ಲ. ಪ್ರಾಚೀನತೆಯ ಯಾವ ಕುರುಹುಗಳೂ ಅಲ್ಲಿಲ್ಲ. ಊರಲ್ಲಿಯ ಮುಕ್ಕಾಲು ಪಾಲು ಜನ ಹಾಲುಮತದವರು."[೪]

ಗ್ರಾಮದ ಉತ್ತರ ಭಾಗವೆಲ್ಲಾ ಹಾಳು ಬಿದ್ದಿದೆ. ೭೦–೮೦ ಮನೆಗಳಿರುವ ಅಲಕನೂರಿನ ಪ್ರಮುಖ ಆಕರ್ಷಣೆಯೆಂದರೆ ಕರೆಸಿದ್ಧೇಶ್ವರನ ಭವ್ಯ ದೇವಾಲಯ. ಎರಡು ಎಕರೆಗಳಷ್ಟು ವಿಸ್ತೀರ್ಣದ ದೇವಾಲಯಕ್ಕೆ ಪೂರ್ವ ದಿಕ್ಕಿನಲ್ಲಿ ಪ್ರವೇಶ ದ್ವಾರವಿದೆ. ಗರ್ಭಗೃಹ, ಸುಕನಾಸಿ, ಮುಖ ಮಂಟಪಗಳನ್ನು ಹೊಂದಿರುವ ಈ ದೇವಸ್ಥಾನ ತಗ್ಗು ಪ್ರದೇಶದಲ್ಲಿದೆ. ಇದರ ಸುತ್ತಲೂ ಪ್ರಾಂಗಣವಿದ್ದು ಪಶ್ಚಿಮ ಮತ್ತು ದಕ್ಷಿಣೋತ್ತರ ದಿಕ್ಕುಗಳಲ್ಲಿ ಅಂತಸ್ತಿನ ಸುಂದರ ಮೊಗಸಾಲೆಗಳಿವೆ. ಮೊಗಸಾಲೆಗಳ ಮೇಲಂತಸ್ತಿನಲ್ಲಿ ಹಾಲುಮತ ಪುರಾಣ ಚಿತ್ರಗಳನ್ನು ಬಿಡಿಸಲಾಗಿದೆ.

ದೇವಾಲಯದ ಹೊರ ನಕ್ಷೆ ವಿಜಯನಗರ ವಾಸ್ತುಶೈಲಿಯ ಮಾದರಿಯಲ್ಲಿದೆ. ಅದು ದಕ್ಷಿಣ ಕನ್ನಡ ಜಿಲ್ಲೆಯ ದೇವಾಲಯ ಮುಖ ಮಂಟಪಗಳನ್ನು ಹೋಲುವುದು ದೇವಸ್ಥಾನದ ಮುಖ ಮಂಟಪ ಕಬ್ಬಿಣ ಕಂಬಿಗಳಿಂದ ನಿರ್ಮಾಣಗೊಂಡಿದ್ದು, ಛಾವಣಿಗೆ ಝಿಂಕುಶೀಟು ಜೋಡಿಸಲಾಗಿದೆ.

ಆದರೆ ಈ ದೇವಸ್ಥಾನಕ್ಕೆ ದ್ವಾರ ಗೋಪುರಗಳಿಲ್ಲ. ಗರ್ಭ ಗೃಹದ ದಕ್ಷಿಣದಲ್ಲಿರುವ ನಿರ್ಗಮನದ್ವಾರ ದೇವಾಲಯದ ಹೊರ ಪ್ರಾಂಗಣಕ್ಕೆ ಸಂಪರ್ಕ ಕಲ್ಪಿಸುವುದು. ಅಲ್ಲಿಯೇ ಕರೆಸಿದ್ಧನ ಕುದುರೆಯ ಕೋಣೆಯಿದೆ. ಅದಕ್ಕೆ ಹೊಂದಿಕೊಂಡಿರುವ ಪಶ್ಚಿಮದ ಕೋಣೆಯಲ್ಲಿ ಕರೆಸಿದ್ಧನ ಆನೆಯಿದೆ. ದೇವಾಲಯದ ಪೂರ್ವೋತ್ತರ ದಿಕ್ಕುಗಳಲ್ಲಿ ದ್ವಾರಗಳನ್ನು ಜೋಡಿಸಲಾಗಿದೆ. ಉತ್ಸವ ಸಂದರ್ಭಗಳಲ್ಲಿ ಬಳಸಲಾಗುವ ಪಾಕಶಾಲೆ ಪುಟ್ಟ ಮೃಗಾಲಯ ಹೊರಾಂಗಣದ ಹೊರಗೋಡೆಗೆ ಹೊಂದಿಕೊಂಡಿದೆ. ಈ ಹೊರಾಂಗಣವೇ ಸಾಮೂಹಿಕ ಭೋಜನದ ಸ್ಥಳ.

ಗರ್ಭಗುಡಿಯಲ್ಲಿ ಅಸ್ಪಷ್ಟ ಆಕೃತಿಯ ಮೂರ್ತಿ ಶಿಲ್ಪವಿದೆ. ಅದಕ್ಕೆ ಬಂಗಾರದ ಮುಖ ತೊಡಿಸಲಾಗಿದೆ. ಪೂಜಾರಿಯನ್ನು ಹೊರತುಪಡಿಸಿ ಬೇರೆ ಯಾರಿಗೂ ಗರ್ಭ ಗೃಹದಲ್ಲಿ ಪ್ರವೇಶವಿರುವುದಿಲ್ಲ. ಕರೆದೇವರ ಬಲಗಡೆ ಮಾಯಕ್ಕನ ಮೂರ್ತಿಯಿದೆ. ಕರೆದೇವರದು ಶ್ವೇತವರ್ಣ, ಪೂಜಾರಿ ಬಿಳಿ ಪಂಚೆ, ಬಿಳಿ ಅಂಗಿ ತೊಟ್ಟುಕೊಂಡು, ತಲೆಗೆ ಬಿಳಿ ರುಮಾಲು ಸುತ್ತಿಕೊಳ್ಳುವನು. ದೇವರಿಗೆ ಬೇರಾವುದೇ ಆಡಂಬರವಿಲ್ಲ. ಸತ್ತಿಗೆ, ನಿಶಾನೆ, ಗೊಂಡೆಯ ಕಂಬಳಿ, ಡೊಳ್ಳು-ಇವು ದೇವರ ಲಾಂಛನಗಳು. ಇವುಗಳ ಮೇಳಕ್ಕೆ ಶಿವಸ್ಥಾನವೆಂದು ಕರೆಯುವರು. ರವಿವಾರದಂದು ದರ್ಶನಾಕಾಂಕ್ಷಿಗಳ ಸಂಖ್ಯೆ ಅಧಿಕವಾಗಿರುತ್ತದೆ. ಉಪ್ಪಿಲ್ಲದ (ಸಪ್ಪೆ) ಅನ್ನ ಮತ್ತು ತುಪ್ಪವನ್ನು ದೇವರಿಗೆ ನೈವೇದ್ಯವಾಗಿ ಕೊಡುತ್ತಾರೆ. ಅಲಕನೂರಿನ ಬೇಡ ಜನಾಂಗದವರು ನೈವೇದ್ಯದ ಬದಲಾಗಿ 'ಪಡಿ' ಕೊಡುವರು.

ಮದುವೆ, ವಾಸ್ತುಶಾಂತಿ, ಹಬ್ಬ ಮೊದಲಾದ ಸಂದರ್ಭಗಳಲ್ಲಿ ಜನರು ತಮ್ಮ ಮನೆಗಳಿಗೆ ದೇವರ ಪಲ್ಲಕ್ಕಿಗಳನ್ನು ಬರಮಾಡಿಕೊಳ್ಳುತ್ತಾರೆ. ಆದರೆ ಈ ದೇವರು ಯಾರ ಮನೆಗೂ ಹೋಗುವುದಿಲ್ಲ. ದೇವರ ಕೋತ್ವಾಲರೆಂದು ಹೇಳುವ ಆನೆ ಕುದುರೆಗಳು ಮಾತ್ರ ಆಮಂತ್ರಣದ ಮೇರೆಗೆ ಭಕ್ತರ ಮನೆಗೆ ಹೋಗುತ್ತವೆ. ಭಕ್ತರು ಮನೆಗೆ ಬಂದ ಕರೆದೇವರ ಕುದುರೆಗೆ ಐನೂರು, ಆನೆಗೆ ಸಾವಿರ, ಪೂಜಾರಿಗೆ ಐನೂರು, ಹಾಡುವ ಮೇಳಕ್ಕೆ ಐನೂರು ರೂಪಾಯಿಗಳಂತೆ ಲೆಕ್ಕಹಾಕಿ ಕಾಣಿಕೆ ನೀಡುತ್ತಾರೆ.

ಈ ಹಣವೆಲ್ಲಾ ದೇವರ ಭಂಡಾರಕ್ಕೆ ಸಂದಾಯವಾಗುವುದು. ಭಕ್ತರ ಹಣವನ್ನು ಭಂಡಾರಕ್ಕೆ ಸೇರಿಸಿ, ಉತ್ಸವಗಳ ವೆಚ್ಚಕ್ಕೆ ವಿನಿಯೋಗಿಸಲಾಗುತ್ತದೆ. ಕರೆಸಿದ್ಧೇಶ್ವರನ ಜಾತ್ರೆ-ಉತ್ಸವಗಳಿಗಾಗಿ ಜನರಿಂದ ವಂತಿಗೆ ಎತ್ತುವ ಸಂಪ್ರದಾಯ ಇಲ್ಲಿ ಇಲ್ಲದಿರುವುದು ವಿಶೇಷ.

**ಕರಸಿದ್ಧ ಮತ್ತು ದಂತಕಥೆ :**

ಕರೆಸಿದ್ಧ, ಕರಸಿದ್ಧ, ಕರಿಸಿದ್ಧ, ಖರಸಿದ್ಧ, ಕರಿಯಪ್ಪ, ಕರಿಯದೇವರು ಹೀಗೆ ಅನೇಕ ಹೆಸರುಗಳಿಂದ ಕರೆಯಲ್ಪಡುವ ಈ ದೇವರ ಉಗಮದ ಕುರಿತು ದಂತಕಥೆಯೊಂದು ಈ ಭಾಗದಲ್ಲಿ ಪ್ರಚಲಿತದಲ್ಲಿದೆ. ಇಲ್ಲಿಯ ಜನರು ತಮ್ಮ ದೇವರದು ಉದ್ಭವ ಮೂರ್ತಿ ಎಂದು ನಂಬಿ, ಈ ಕಥೆ ಹೇಳುತ್ತಾರೆ. ಅಲಕನೂರಿನ ಮೂಲ ಹೆಸರು ತಿಪ್ಪರಟ್ಟಿ. ಬೀರಣ್ಣದೇವರು ಕೊಣ್ಣೂರಲ್ಲಿ "ಕ್ವಾಣೇಸೂರ" ದೈತ್ಯನನ್ನು ಕೊಂದು, ತನ್ನ ಕೈಯಲ್ಲಿಯ (ಆಯುಧ) ಅಲಗನ್ನು ಹಾರಿಸಿದ. ಅದು ತಿಪ್ಪರಟ್ಟಿಯ ಆಲದ ಕಟ್ಟೆಯ ಮೇಲೆ ಬಂದು ಬಿತ್ತು. ಅಂದಿನಿಂದ ತಿಪ್ಪರಟ್ಟಿಗೆ 'ಅಲಕನೂರ' ಎಂಬ ಹೆಸರು ಬಂತು.

ಕಂಕಣವಾಡಿಯ ದೇಸಗತಿಯ ಒಂದು ಹಳ್ಳಿಯಾಗಿದ್ದ ತಿಪ್ಪರಟ್ಟಿಯಲ್ಲಿ ಬೇಡರ ಒಡೆತನವಿತ್ತು. ಊರ ದಕ್ಷಿಣದಲ್ಲಿ ದನಕರುಗಳು ಮೇಯವ ಬಯಲು ಪ್ರದೇಶವಿತ್ತು. ಅಲ್ಲಿ ಹಳ್ಳದ ಒರತೆಯಿತ್ತು. ಹಾರೂಗೇರಿಯ ಗೌಡನ ಆಕಳುಗಳು ಅಲ್ಲಿಗೆ ಮೇಯಲು ಬರುತ್ತಿದ್ದವು. ಅವುಗಳನ್ನು 'ಸಿದರಾಯಿಮುತ್ಯಾ' ಎಂಬ ಆಳುಮಗ ಕಾಯುತ್ತಿದ್ದ. ದನಗಳನ್ನು ಮೇಯಲು ಬಿಟ್ಟು ಆತ ವಿಶ್ರಮಿಸುತ್ತಿದ್ದ ಸಮಯದಲ್ಲಿ ಆ ಹಿಂಡಿನಲ್ಲಿಯ (ಹುಟ್ಟು ಗೋಮಾರಿ) ಹುಟ್ಟುಕುಮಾರಿ ಆಕಳೊಂದು ಅಲ್ಲಿದ್ದ ಹುತ್ತಿನಲ್ಲಿ ಪ್ರತಿನಿತ್ಯ ಹಾಲು ಕರೆಯುತ್ತಿತ್ತಂತೆ. ಯಾರೂ ಇದನ್ನು ಗಮನಿಸಿರಲಿಲ್ಲ. ಆಕಳ ಮೊಲೆಗಳಿಗೆ ನೊರೆ ಮಾತ್ರ ಹಾಗೆಯೇ ಉಳಿಯುತ್ತಿತ್ತು. ಹೀಗೆ ಹನ್ನೆರಡು ವರುಷ ಕಳೆದವು. ಒಂದು ದಿನ ಆಕಳ ಮೊಲೆಗಳಿಗೆ ಅಂಟಿದ ನೊರೆ ಹೆಂಡತಿಯ ಕಣ್ಣಿಗೆ ಬಿತ್ತು. ಅವಳು ಈ ವಿಸ್ಮಯವನ್ನು ಗಂಡನಿಗೆ ತಿಳಿಸಿದಳು. ಆತನಿಗೂ ಆಶ್ಚರ್ಯವಾಯಿತು.

ರಹಸ್ಯವನ್ನು ಭೇದಿಸಲು ಗೌಡ ಒಡಕಿ–ತಾನಕ್ಕೆ ಬಂದು ಅಡಗಿ ಕೂಡ್ರುತ್ತಾನೆ. ಆ ಆಕಳು ದಿನದಂತೆ ಹುತ್ತಿಗೆ ಹಾಲೆರೆಯುತ್ತಿರುವಾಗ ಗೌಡನೋಡಿ ರೋಮಾಂಚಿತಗೊಳ್ಳುವನು. ಆಗ 'ಹಾಳು ಹಾರೂಗೇರಿಗೆ ಬರುವವನಿದ್ದೇನೆ; ಹಳುವಿನ ಬಂಡಿಗೆ ಹನ್ನೆರಡು ಎತ್ತು ಹೂಡಿ, ಐವರು ಮುತ್ತೈದೆಯರೊಂದಿಗೆ ಬಂದು ನನ್ನನ್ನು ಕರೆದುಕೊಂಡು ಹೋಗು' ಎಂಬ ಅಶರೀರವಾಣಿ ಗೌಡನ ಕಿವಿಗೆ ಬೀಳುವುದು.

ರವಿವಾರದಂದು ಗೌಡ ಬಂಗಾರದ ತಟ್ಟೆಗಳಲ್ಲಿ ಮುತ್ತಿನಾರತಿ ಹಿಡಿದುಕೊಂಡು ಐವರು ಮುತ್ತೈದೆಯರೊಂದಿಗೆ ಹನ್ನೆರಡು ಎತ್ತುಗಳ ಹಳುವಿನ ಬಂಡಿ ಹೂಡಿಕೊಂಡು ಅಲಕನೂರಿನ ಒಡಕಿತಾಣಕ್ಕೆ ಬರುತ್ತಾನೆ. ಹುತ್ತವನ್ನು ಅಗಿದಾಗ ಅವನಿಗೆ ಕರೆಸಿದ್ಧನ ಮೂರ್ತಿ ಸಿಗುವುದು. ಅದನ್ನು ಬಂಡೆಯಲ್ಲಿಟ್ಟುಕೊಂಡು ಹಾರೂಗೇರಿಗೆ ಬರುವಾಗ ದಾರಿಯಲ್ಲಿ (ಈಗ ಕರೆಸಿದ್ಧನ ದೇವಸ್ಥಾನದ ಸ್ಥಳದಲ್ಲಿ) ಬಂಡಿಯ ಹಾರಿ ಮುರಿದು, ನೆಲಕ್ಕೆ ಕುಸಿಯಿತು. ಆಗ ದೇವರ ಮೂರ್ತಿ ನೆಲಕ್ಕುರುಳಿತು. ಅದನ್ನೆತ್ತಲು ಎಷ್ಟು ಪ್ರಯತ್ನಿಸಿದರೂ

ಸಾಧ್ಯವಾಗಲಿಲ್ಲ. 'ಅಲಕನೂರಿನಲ್ಲಿಯೇ ನೆಲೆಸಿ, ಅಲಕನೂರನ್ನು ಅರಮನೆ ಮಾಡುವುದಾಗಿ', ದೇವವಾಣಿ ಮೊಳಗಿತು. ಹಾರೂಗೇರಿಯ ಗೌಡ ಕರೆಸಿದ್ಧನ ಮೂರ್ತಿಯನ್ನು ಬಿಟ್ಟು ಹಿಂದಿರುಗಿದ. ಗೌಡನ ಆಳು ಮಗ 'ಸಿದರಾಯಮುತ್ಯಾ ಕರೆಸಿದ್ಧನ ಮುಖಪೂಜೆ ಮಾಡುತ್ತ ಅಲ್ಲಿಯೇ ನೆಲೆಸಿದ. ಮಣ್ಣಮಾಳಿಕೋಟೆಯ ಹೆಣ್ಣುಮಗಳೊಬ್ಬಳು ತನ್ನ ನಾಲ್ವರು ಗಂಡು ಮಕ್ಕಳೊಂದಿಗೆ ಅಲಕನೂರಕ್ಕೆ ಬಂದಿದ್ದಳು. ಅವರಲ್ಲಿಯ ಮೂವರು ಮಕ್ಕಳು ಒಂದೇ ದಿನ ತೀರಿದರು.' ಉಳಿದವನು ೧೨ ವರುಷಗಳ ಕಾಲ ದೇವರ ಬೆನ್ನು ಪೂಜೆ ಮಾಡಿ ವರ ಪಡೆಯುತ್ತಾನೆ. ಆತನ ವಂಶಜರೇ ಇಂದು ಕರೆಸಿದ್ಧನ ಪೂಜಾರಿಗಳಾಗಿರುವರು. ಭವಿಷ್ಯ ಹೇಳುತ್ತಿದ್ದ ಕಂಟಿಕಾರ ಸಿದ್ಧಪ್ಪನ ವಂಶಜರು ದೇವಸ್ಥಾನದ ಉಸ್ತುವಾರಿ ವಹಿಸಿಕೊಂಡಿದ್ದಾರೆ. ಹದಿನಾರು ಹಳ್ಳಿಯ ಒಡೆಯನಾಗಿದ್ದ ಕಂಕಣವಾಡಿಯ ದೇಸಾಯಿ ದೇವಸ್ಥಾನಕ್ಕೆ ೮೦ ಎಕರೆ ಜಮೀನು ದತ್ತಿಯಾಗಿ ನೀಡಿದುದನ್ನು ಹಾಗೂ ಉತ್ತೂರು ಕಟ್ಟಿಗೆ ವ್ಯಾಪಾರಿ ಹರಕೆ ಹೊತ್ತು ಗುಡಿ ಕಟ್ಟಿಸಿದುದನ್ನೂ ಊರಿನ ಹಿರಿಯರು ಕಥೆ ಕಟ್ಟಿ ಹೇಳುವರು.

ಇತ್ತೀಚಿಗೆ ಹಳೆಯ ಗುಡಿಯನ್ನು ತೆಗೆದು ಹಾಕಿ ಆಧುನಿಕ ಭವ್ಯ ದೇವಾಲಯ ನಿರ್ಮಿಸಲಾಗಿದೆ. ಹಳೆಯ ಚಿಕ್ಕ ಗುಡಿಯನ್ನು ಹಿರಿಯರು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಅಣ್ಣಪ್ಪ ಮುತ್ತೂರ ಬರೆದಿರುವ 'ಶ್ರೀ ಕರೆಸಿದ್ಧೇಶ್ವರ ಪುರಾಣದಲ್ಲಿ ಬಾಗಿಯ ಬಂಕನಾಥನ ವಧೆಗೈದ ಬೀರೇಶ್ವರನು 'ಹಾಲಹಳ್ಳಕ್ಕೆ ಬಂದು ಅಲ್ಲಿ ಸಿಂಗಾಡಿ ಸುಲ್ತಾನನೆಂದು ಹೆಸರಾಗಿ ಅಲಕನೂರಿರುವ ಸ್ಥಳದಲ್ಲಿ ಬೀರಪ್ಪನಾಗಿ ನೆಲೆಸಿದನೆಂದು ವರ್ಣಿಸಲಾಗಿದೆ.'

ಕರೆಸಿದ್ಧ ಯಾರ ಎಂಬುದು ಜಿಜ್ಞಾಸೆಯ ವಿಷಯ. ಆತ ಸಿದ್ಧಪುರುಷನೋ, ದೈವಪುರುಷನೋ ತಿಳಿಯದು. ಜನರು ಮಾತ್ರ ಆತನನ್ನು ದೈವ ಪುರುಷನೆಂದೇ ನಂಬಿರುವರು. ಇಲ್ಲಿಯ ಜನರು ಹುನ್ನೂರು ಬೀರಪ್ಪ, ಕೊಣ್ಣೂರು ಕರಿಯಪ್ಪ, ಅಲಕನೂರು ಕರೆಸಿದ್ಧ ಇವರೆಲ್ಲರೂ ಒಂದೇ ಎಂದು ಹೇಳುತ್ತಾರೆ. 'ಕರೆಸಿದ್ಧ' ಎಂಬುದು ಬೀರ ದೇವರ ಬಾವನ್ನ (೫೨) ಬಿರುದಗಳಲ್ಲೊಂದು. ಕ್ವಾಣಗನೂರು ಕ್ವಾಣೇಸೂರನ ವಧೆ ಮಾಡಿದ ಬೀರಪ್ಪನೇ 'ಕರಿದೇವ' ರೆಂದು ಪ್ರಸಿದ್ಧನಾಗಿರುವುದಾಗಿ 'ಜನಪದ ಹಾಲುಮತ ಮಹಾಕಾವ್ಯ' ಹೇಳುವುದು.

"ಕ್ವಾಣೇಸೂರನ ವಧವ ಮಾಡ್ಯಾನ ಕರಿಯದೇವರು ಅನಸ್ಯಾನ
ಕ್ವಾಣೇಸೂರನ ದೈತ್ಯನ ತಲಿಯಾ ಗದ್ದುಗಿ ಆಗುತಾವೇನ
ಗದ್ದುಗಿ ಮ್ಯಾಲೋ ತಮ್ಮ ಲಿಂಗ ಬೀರಣ್ಣ ದೇವರ
ಲಿಂಗಬೀರಣ್ಣದೇವರ ಕರಿಯಾ ದೇವರ ಅನಸ್ಯಾನ".[೧೦]

ಹಾರೂಗೇರಿಯ ಜನಪದ ಕವಿ 'ಅಲಭೈರಿ' ಕೂಡ ಇದೇ ಅಭಿಪ್ರಾಯವನ್ನು ಬೆಂಬಲಿಸುತ್ತಾನೆ. ಆತನ ಪದ ಹೀಗಿದೆ.

“ವೀರಭದ್ರನವತಾರವ ತಾಳಿದವ ಬೀರೇಶ್ವರ ಬೀರಪ್ಪನೋ
ಸಾರಕುರುಬರಿಗೆ ತೋರಿದ ಕಂಟಕ ಹಾರಿಸಿದವ ಬೀರಪ್ಪನೋ
ಕ್ವಾಣೇಸೂರನ ಪ್ರಾಣ ಹೊಡೆದಾನೊ ಜಾಣದೇವ ಬೀರಪ್ಪನೋ
ಕರೆಸಿದ್ಧನಾಗಿ ಧರೆಯೊಳು ಮೇಲಾಗಿ ಮೆರೆದಾವ ತಾ ಬೀರಪ್ಪನೋ
ಮೆರೆದವ ಗುರುಸಿದ್ಧೇಶ್ವರ ನೆನೆಸಿ ಬಿರುದಾವಳಿ ಬೀರಪ್ಪನೋ
ಜಾತಿ, ನೀತಿ, ಕುಲಗೋತ್ರಕ ಸಿಲುಕಿದಾತನುತಾ ಬೀರಪ್ಪನೋ
ಮಾತು ಮನಸಿಗೆ ತೀರ್ಥವಾದವು ತಾತನಾದ ಬೀರಪ್ಪನೋ”.[೧೧]

ಹಲವು ಜನಪದ ಕವಿಗಳು ಕರಿಸಿದ್ಧನನ್ನು ಅಲ್ಲಮನ ಅವತಾರವೆಂದು ಬಣ್ಣಿಸಿರುವರು. ಒಟ್ಟಿನಲ್ಲಿ ‘ಕರಿಸಿದ್ಧ’ (ಬೀರಪ್ಪ) ‘ಹರ’ನ ಅವತಾರವೆಂಬುದು ಬಹುಜನರ ಅಭಿಪ್ರಾಯ. ಆದರೆ ಕೆಲವರು ಆತ ‘ಹರಿ’ಯ ಅವತಾರವೆಂದು ಸಾಧಿಸುತ್ತಾರೆ. ‘ಕರಿ’ ಎಂದರೆ ಕೃಷ್ಣವರ್ಣ. ಅಲಕನೂರು ಕರೆಸಿದ್ಧನ ಕರದಲ್ಲಿ ಚಕ್ರವಿರುವುದಾಗಿ ಹೇಳಿ, ಆತ ಹರಿಯೇ ಆಗಿರಬಹುದೆಂಬ ವಿಚಾರವನ್ನು ಒಬ್ಬರು ವ್ಯಕ್ತಪಡಿಸಿದರು.

ಕರೆಸಿದ್ಧನ ದೇವಾಲಯಗಳು ಜಮಖಂಡಿ ತಾಲೂಕಿನ ಕೊಣ್ಣೂರು, ರಾಯಬಾಗ ತಾಲೂಕಿನ ಹಾರೂಗೇರಿ, ಗೋಕಾಕ ತಾಲೂಕಿನ ಬಸಳಿಗುಂದಿ ಮೊದಲಾದೆಡೆಗಳಲ್ಲಿಯೂ ಕರೆಸಿದ್ಧನ ದೇವಾಲಯಗಳು ಕಂಡು ಬರುತ್ತವೆ.

**ಕರೆಸಿದ್ಧ ಪದ ನಿಷ್ಪತ್ತಿ :**

ಜನಪದರು ‘ಕರೆಸಿದ್ಧೇಶ್ವರ’ ಪದದ ನಿಷ್ಪತ್ತಿಯನ್ನು ಹಲವು ರೀತಿಯಲ್ಲಿ ಸಾಧಿಸುತ್ತಾರೆ. ಅವರ ದೃಷ್ಟಿಯಲ್ಲಿ ಕರೆಸಿದ್ಧ, ಖರೆಸಿದ್ಧ ‘ಖರೆ’ ಎಂದರೆ ಸತ್ಯ. ಕ್ವಾಣಗನೂರಿನ ದೈತ್ಯನನ್ನು ಸಂಹರಿಸಲು ಬೀರಪ್ಪನನ್ನು ಹೊರತುಪಡಿಸಿ ಬೇರಾವ ಸಿದ್ಧರಿಗೂ ಸಾಧ್ಯವಾಗಲಿಲ್ಲ. ಅದಕ್ಕಾಗಿಯೇ ಆತನನ್ನು ಕರೆ(ಖರೆ) ಸಿದ್ಧನೆಂದು ಕರೆದರು. (ಅಂದರೆ ಉಳಿದವರೆಲ್ಲರು ಸುಳ್ಳುಸಿದ್ಧರು) ‘ಕರೆ’ ಎಂಬ ವಿಶೇಷಣಕ್ಕೆ ಅನೇಕ ಅರ್ಥಗಳಿವೆ. ಅದು ನಾಮವೂ ಹೌದು; ಧಾತುವೂ ಹೌದು. ಈ ವಿಶೇಷಣವನ್ನು ದೇವರ ಮಹಿಮೆಯನ್ನು ಬಣ್ಣಿಸಲು ಪೂರಕವಾಗಿ ಅರ್ಥೈಸಲಾಗುತ್ತದೆ.

ಒಮ್ಮೆ ಇಲ್ಲಿ ಬೇಡರು ಕುಡಚಿಗೆ ಕಳ್ಳತನಕ್ಕೆ ಹೋಗಿದ್ದರಂತೆ, ರಾತ್ರಿ ಹೊಲವೊಂದರಲ್ಲಿ ಬಿಳಿಜೋಳ ತೆನೆ ಕೊರೆದು ಹೊತ್ತುಕೊಂಡು ಅಲಕನೂರಿಗೆ ಬರುತ್ತಿರುವಾಗ ಹೊಲದವರು ಕಳ್ಳರನ್ನು ಬೆನ್ನಟ್ಟಿದರು. ಕಳ್ಳರು ಓಡುತ್ತ ಬಂದು, ಕರೆಸಿದ್ಧನ ದೇವಾಲಯದಲ್ಲಿ ತೆನೆ ಒಗೆದು ಬಾಗಿಲು ಹಾಕಿದರು. ಅಪಾಯದಿಂದ ಪಾರಾಗಲು ಯೋಚಿಸಿದ ಕಳ್ಳರು ಒಂದು ದಾರಿ ಹುಡುಕಿ, ದೇವರಿಗೆ ಹೀಗೆ ಸವಾಲು ಹಾಕಿದರು. ‘ನೀನು ಖರೆಸಿದ್ಧನಾಗಿದ್ದರೆ ಈ ಬಿಳಿ ಜೋಳ ತೆನೆಗಳನ್ನು ಕಾರಜೋಳ ತೆನೆಗಳನ್ನಾಗಿ ಮಾಡು, ಅನ್ನುವಷ್ಟರಲ್ಲಿ ಕಳ್ಳರು ಸಿಕ್ಕಿ ಬಿದ್ದರು. ಮರುದಿನ ವಿಚಾರ ಪ್ರಾರಂಭವಾಯಿತು.’

ವಿಚಾರಣೆಯ ಕಾಲಕ್ಕೆ ಬೇಡರುವ ತಾವು ಬಿಳಿ ಜೋಳ ತೆನೆಗಳನ್ನೇ ತಂದಿಲ್ಲವೆಂದೂ ವಾದಿಸಿದರು. ದೇವಸ್ಥಾನದ ಬಾಗಿಲು ತೆರೆದು ನೋಡಿದಾಗ ಬಿಳಿಜೋಳ ತೆನೆಗಳೆಲ್ಲಾ ಕಾರಜೋಳ ತೆನೆಗಳಾಗಿದ್ದವು. ಕಳ್ಳರು ಅಪಾಯದಿಂದ ಪಾರಾದರು. ಆಗ ಅಲಕನೂರ ಬೇಡರು ದೇವರ ಮಹಿಮೆಗೆ ತಲೆಬಾಗಿ ಆತನನ್ನು 'ಖರೆಸಿದ್ಧ'ನೆಂದು ಒಪ್ಪಿಕೊಂಡು ಪೂಜಿಸಿದ ಕಥೆಯನ್ನು ಅಲಕನೂರಿನ ಜನ ರಸವತ್ತಾಗಿ ನಿರೂಪಿಸುತ್ತಾರೆ.

ಕರೆಸಿದ್ಧ ಒಂದು ಸಮಾಸಪದ. ಕರಿಯಸಿದ್ಧ, ಕರಿಸಿದ್ಧ, ಕರೆಸಿದ್ಧ 'ಕರೆ' ಎಂಬ ವಿಶೇಷಣ ವರ್ಣಸೂಚಕವಾದುದು. ಕರೆಸಿದ್ಧೇಶ್ವರ ದೇವಸ್ಥಾನದಲ್ಲಿ ನೀಲೇಶ್ವರನ ಭಾವಚಿತ್ರ ಬಿಡಿಸಿ, ಆತನೇ ಕರೆಸಿದ್ಧನೆಂದು ಸೂಚಿಸಲಾಗಿದೆ.

**ಕರೆಸಿದ್ಧನ ಪತ್ರಿಕೌಲು :**

ಕರಿಸಿದ್ಧನ ಕೌಲಿನಲ್ಲಿ ಈ ಭಾಗದ ಜನರಿಗೆ ಅಪಾರ ನಂಬಿಕೆ, ದೇವರವಾಣಿ ಎಂದಿಗೂ ಹುಸಿಹೋಗುವುದಿಲ್ಲವೆಂದು ಹೇಳುತ್ತಾರೆ. ದಿನಂಪ್ರತಿ ಮುಂಜಾನೆ ಮತ್ತು ಸಾಯಂಕಾಲದ ಪೂಜೆಗೆ ೨೦–೩೦ ಜನರು ಕೌಲು ಕೇಳಲು ಕಾದು ನಿಲ್ಲುವರು. ಜನರು ಸಣ್ಣ ಸಣ್ಣ ವಿಷಯಗಳಿಗೂ ಕೌಲು ಕಟ್ಟುತ್ತಾರೆ. ಕೆಲವರಂತೂ ಕೌಲು ಕಟ್ಟದೇ ಯಾವುದೇ ಕಾರ್ಯವನ್ನು ಮಾಡುವುದಿಲ್ಲ. ಹುಚ್ಚುನಾಯಿ ಕಚ್ಚಿದರೆ ಔಷಧ ತೆಗೆದುಕೊಳ್ಳಬೇಕೋ ಅಥವಾ ಬೇಡವೋ ಎಂದು ದೇವರಿಗೆ ಕೌಲು ಕೇಳುತ್ತಾರೆ. ಇದು ಅವರ ಶ್ರದ್ಧೆ ಮತ್ತು ಅಜ್ಞಾನದ ನಿದರ್ಶನವಾಗಿದೆ.

ಕೊಂಕಣದ ಕುರುಬರು ಮಳೆಗಾಲದಲ್ಲಿ ತಮ್ಮ ಕುರಿಗಳನ್ನು ಕೆಳನಾಡಿಗೆ ತರುತ್ತಾರೆ. ತಾವು ತಮ್ಮ ಹಿಂಡುಗಳನ್ನು ಯಾವ ಕಡೆಗೆ ಕರೆದೊಯ್ಯಬೇಕೆಂದು ಅವರು ಕರೆಸಿದ್ಧನ ಕೌಲಿನಿಂದಲೇ ನಿರ್ಧರಿಸುವರು. ತಮ್ಮ ಕುರಿಗಳಿಗೆ ಯಾವುದೇ ರೋಗಗಳು ಬಾರದಿರಲಿ ಎಂದು ಹರಕೆ ಹೊತ್ತು 'ಒಜ್ಜೆ' ಒಪ್ಪಿಸುವ ಸಂಪ್ರದಾಯ ಇಲ್ಲಿದೆ. ದೇವರು ಮನಸ್ಸಿಗೆ ಒಪ್ಪಿಗೆಯಾಗುವ ಕೌಲು ನೀಡದಿದ್ದಲ್ಲಿ ಭಕ್ತರು ಇಂತಿಷ್ಟು ಕುರಿ/ಬಂಗಾರ/ಹಣ/ಧಾನ್ಯ ಇತ್ಯಾದಿಯಾಗಿ ಒಪ್ಪಿಸುವುದಾಗಿ ಹರಕೆ ಹೊತ್ತು ಮತ್ತೆ ಕೌಲು ಕೇಳುವರು. ಇದಕ್ಕೆ ಒಜ್ಜೆ ಹೊತ್ತುಕೊಳ್ಳುವುದು ಎಂದು ಹೇಳುವರು.

ಅಲಕನೂರ ಕರೆಸಿದ್ಧನಿಗೆ ಎರಡು ಹೊತ್ತು ಪೂಜೆ ಸಲ್ಲುವುದು. ಪೂಜಾರಿ ಪೂಜಾ ಸಮಯದಲ್ಲಿ ದೇವರ ಮೈತುಂಬ ಕತ್ತರಿಸಿದ ಪತ್ರಿ ಅಂಟಿಸುತ್ತಾನೆ. ಕೌಲು ಕೇಳುವ ಜನರು ಸುಕನಾಸಿಯಲ್ಲಿ ನೆರೆಯುವರು. ದೇವಸ್ಥಾನದ ಉಸ್ತುವಾರಿ ಹೊತ್ತ ಕಂಠಿಕಾರನು ಕೌಲದ ಫಲಶ್ರುತಿ ಹೇಳುವನು. ದೇವರ ಮೈಗಂಟಿದ ಪತ್ರಿಗಳು ನೆಲಕ್ಕುರುಳಿದಂತೆ ಶುಭಾಶುಭ ಫಲಗಳನ್ನು ತಿಳಿಯುವರು. ಅವರು ಮೊದಲೇ ತಮ್ಮ ಪತ್ರಿಗಳನ್ನು ಗೊತ್ತುಪಡಿಸಿಕೊಳ್ಳುತ್ತಾರೆ. ಹೀಗೆ ಮುಂಜಾನೆ ಮತ್ತು ಸಾಯಂಕಾಲ ಎರಡು ಹೊತ್ತು ಜನರು ಕೌಲು ಕೇಳುವರು.

: ಜಾತ್ರೆ-ಉತ್ಸವಗಳು :

ಮಹಾನವಮಿ, ದೀಪಾವಳಿ, ಭಾರತ ಹುಣ್ಣಿಮೆ ಹಾಗೂ ಯುಗಾದಿ ಸಂದರ್ಭಗಳಲ್ಲಿ ಕರೆಸಿದ್ಧೇಶ್ವರ ದೇವಸ್ಥಾನದಲ್ಲಿ ವಿಶೇಷ ಉತ್ಸವ ಜರುಗುತ್ತವೆ. ವರ್ಷದಲ್ಲಿ ನಾಲ್ಕು ಬಾರಿ ದೇವರ ಪಲ್ಲಕ್ಕಿ ಸುತ್ತುವುದು. ಮಹಾನವಮಿ ಅಮವಾಸ್ಯೆಯಂದು ಪೂಜಾರಿ ದೇವಾಲಯದಲ್ಲಿ ಘಟ ಸ್ಥಾಪಿಸಿ 'ಮುಳ್ಳಾವಿಗೆ' ಮೆಟ್ಟುತ್ತಾನೆ. ಅವನ ವಂಶದ ಗಂಡು ಮಕ್ಕಳು ಪಾದರಕ್ಷೆ ಮೆಟ್ಟುವುದಿಲ್ಲ.

ಮಹಾನವಮಿಯ ದಿನ ದೇವರು ಪಲ್ಲಕ್ಕಿ ಏರಿ ಹೊರ ಬರುತ್ತಾನೆ. ಅಂದು ಹುನ್ನೂರು, ಹುಲಿಜಂತಿ, ಕೊಣ್ಣೂರು ಸತ್ತಿಗೆಗಳು ಇಲ್ಲಿಗೆ ಬರುತ್ತವೆ. ಇಡೀ ದಿನ ಅನ್ನ ದಾಸೋಹ ನಡೆಯುವುದು. ದೀಪಾವಳಿಯ ಬ್ರಹ್ಮನ ಹಬ್ಬದಂದು ದೇವರಿಗೆ ವಿಶೇಷ ಪೂಜೆ ಸಲ್ಲುವುದು. ಕರೆ ಸಿದ್ಧನ ತಂದೆ ಎಂದು ನಂಬಲಾಗಿರುವ ಬ್ರಹ್ಮದೇವರ ದೇವಾಲಯ ಅಲಕನೂರಿನ ಒಡಕಿಯಲ್ಲಿದೆ. ಅಲ್ಲಿಯೂ ಪೂಜೆ ನೆರವೇರುವುದು. ಚತುರ್ದಶಿ ದಿನ ಕಂಬಳಿ, ಸತ್ತಿಗೆ ನಿಶಾನೆ ಡೊಳ್ಳುಗಳೊಂದಿಗೆ ದೇವರ ಪಲ್ಲಕ್ಕಿ ಗುಡಿಸುತ್ತುವುದು. ಕೈ ಪಟ್ಟು, ದಟ್ಟಿ ಕುಣಿತ, ಲಾಗ ಹಾಕುವ ಅನೇಕ ಕಾರ್ಯಕ್ರಮಗಳು ನಡೆಯುತ್ತವೆ. ಹನ್ನೆರಡು ವರ್ಷಗಳಿಗೊಮ್ಮೆ ಹನ್ನೆರಡು ಊರುಗಳ ದೇವರು ಕರೆಸಿದ್ಧನ ಭೆಟ್ಟಿಗೆ ಬರುತ್ತವೆ.

ಭಾರತ ಹುಣ್ಣಿಮೆಯ ರಾತ್ರಿ ಹತ್ತು ಗಂಟೆಗೆ ಆನೆ ಕುದುರೆ-ಲಾಂಛನಗಳೊಂದಿಗೆ ದೇವರ ಪಲ್ಲಕ್ಕಿ ದೇವಸ್ಥಾನದಿಂದ ಹೊರಬಂದು, ಹೊರವಲಯದಲ್ಲಿರುವ ಅಲದ ಕಟ್ಟೆಯ ಮೇಲೆ ವಿಶ್ರಮಿಸಿ, ಮಧ್ಯರಾತ್ರಿಯ ಹೊತ್ತಿಗೆ ಮತ್ತೆ ದೇವಸ್ಥಾನಕ್ಕೆ ಮರಳುವುದು. ಆ ಸಮಯದಲ್ಲಿ ದೇವಾಲಯದ ಪ್ರವೇಶ ದ್ವಾರದಲ್ಲಿ ಪೂಜಾರಿಯೊಬ್ಬ 'ಮರಿ'ಯೊಂದನ್ನು ಕತ್ತರಿಸುತ್ತಾನೆ. ಆದರೆ ಕರಿ ದೇವರಿಗೆ ಬೇಟೆಗೆ ಬೋನ ನಿಷಿದ್ಧ, ಜಾತ್ರೆ-ಉತ್ಸವಗಳ ವೆಚ್ಚವನ್ನು ಭಕ್ತರು ನೀಡುವ 'ಹರಕೆ'ಯ ಹಣದಿಂದಲೇ ಸರಿದೂಗಿಸಲಾಗುತ್ತಿದೆ.

**ಸಾಂಸ್ಕೃತಿಕ ಸಂಸ್ಥಾನ :**

ಅಲಕನೂರು ಕರಿಸಿದ್ಧನ ದೇವಸ್ಥಾನ ಬುಡಕಟ್ಟು ಜನಾಂಗವೊಂದರ ಸಾಂಸ್ಕೃತಿಕ ಕೇಂದ್ರ; ಇದು ಡೊಳ್ಳಿನ ಮೇಳಗಳ ತವರು. ಇಲ್ಲಿ ೧೦-೧೨ ಹಾಡುವ ಮೇಳಗಳಿವೆ. ಈ ಮೇಳದವರು ಕಂಟಿಕಾರನ ಅನುಮತಿ ಇಲ್ಲದೆ ಎಲ್ಲಿಯೂ ಹಾಡಲು ಹೋಗುವುದಿಲ್ಲ. ಭಕ್ತರ ಆಹ್ವಾನದ ಮೇರೆಗೆ ಕಂಠಿಕಾರನು ಸರತಿಯಂತೆ ಹಾಡುವ ಮೇಳಗಳಿಗೆ ಅವಕಾಶ ನೀಡುತ್ತಾನೆ. ಭಕ್ತರು ಕೊಡುವ ಹಣವನ್ನು ಅವರೆಲ್ಲರೂ ಕಂಠಿಕಾರನಿಗೆ ಒಪ್ಪಿಸುವರು. ಅವನು ಅದರಲ್ಲಿಯ ಅರ್ಧದಷ್ಟು ಮೊತ್ತವನ್ನು ದೇವರ ಭಂಡಾರಕ್ಕೆ ಸೇರಿಸಿಕೊಂಡು ಉಳಿದ ಮೊತ್ತವನ್ನು ಮೇಳಕ್ಕೆ ಕೊಡಮಾಡುವನು. ಅದನ್ನೇ ಅವರು ಮಹಾಪ್ರಸಾದವೆಂದು ಸ್ವೀಕರಿಸುವರು.

## ೨.೨.೫ ಶ್ರೀ ರೇವಣಸಿದ್ಧೇಶ್ವರರು :

ಶ್ರೀ ರೇವಣಸಿದ್ಧೇಶ್ವರ ದೇವರು ನಮ್ಮ ತಾಲೂಕಿನಲ್ಲಿ ಮತ್ತೊಬ್ಬ ಹಾಲುಮತ ದೇವರು. 'ಶ್ರೀ ರೇವಣಸಿದ್ಧೇಶ್ವರ ಲೀಲಾ ಸಂಯುಕ್ತ ಹಾಲು ಮತೋತ್ತೇಜಕ ಪುರಾಣ'ದಿಂದ ಹಾಗೂ ಡೊಳ್ಳಿನ ಹಾಡುಗಳಿಂದ ತಿಳಿದು ಬರುವಂತ ಈತ ಶೈವ ಮತಾವಂಬಿಯಾಗಿದ್ದು ಕುರುಬರ ಮಾರ್ಗದರ್ಶಿ ರಸ್ತಾಪೂರದ ಭೀಮಕವಿ ರಚಿತ ಪುರಾಣ ದೇದಾರುಕನ ಶಾಪದಿಂದ ರೇವಣಸಿದ್ಧೇಶ್ವರ ಭೂಲೋಕದಲ್ಲಿ ಅವತರಿಸಿ ಬಂದ ವಿವರ ದೊರೆಯುತ್ತಿದೆ. ಇಲ್ಲಿ ಶ್ರೀ ರೇವಣಸಿದ್ಧೇಶ್ವರರ ಜೀವನ ಕಥೆ ಈ ರೀತಿಯಾಗಿ ಮೂಡಿಬಂದಿದೆ.

ಹಾಲುಮತ ಕುರುಬ ಜನಾಂಗದ ಮುದ್ದುಗೊಂಡು ಮತ್ತು ಮುದ್ದವ್ವ ದಂಪತಿಗಳ ಏಳು ಜನ ಮಕ್ಕಳಲ್ಲಿ ಉಂಡಾಡ ಪದ್ಮಗೊಂಡ ಅಥವಾ ಉಂಡಾಡ ಪದ್ಮಣ್ಣನೇ ಕೊನೆಯವನು. ಇವನ ಮೊದಲನೆಯ ಹೆಂಡತಿಯ ಹೊಟ್ಟೆಯಲ್ಲಿ ಐದು ಜನ ಮಕ್ಕಳು ಜನಿಸುತ್ತಾರೆ.

೧) **ಜಗ್ಗಲಿ ಮುತ್ತಯ್ಯ**
೨) **ಸಹಾಯ ಮುತ್ತಯ್ಯ**
೩) **ಸೋಹ ಮುತ್ತಯ್ಯ**
೪) **ಶಾಂತಿಮಯ ಮುತ್ತಯ್ಯ**
೫) **ದೇವರಾಜ**

"ನಾಲ್ಕನೆಯವನಾದ ಶಾಂತಿಮಯ ಮುತ್ತಯ್ಯನೇ ರೇವಣಸಿದ್ಧೇಶ್ವರನ ತಂದೆ. ಆತ ಗೃಹಸ್ಥನಾದರೂ ಶಿವಯೋಗಿ. ಹಳೆ ಮೈಸೂರು ಪ್ರಾಂತ್ಯದ ಕಡೆ ಲಿಂಗಾಯತರು ಕಟ್ಟುಲಿಂಗದೋರು, ಕುರಬರು ಹುಟ್ಟುಲಿಂಗದೋರು ಎಂಬ ಜನಪದ ಗಾದೆ ಇದೆ. ಅದರ ಅರ್ಥ ಲಿಂಗಾಯತರು ಲಿಂಗಕಟ್ಟಿಕೊಂಡು ಶಿವನ ಆರಾಧಕರಾದರೆ; ಕುರುಬರು ಲಿಂಗ ಕಟ್ಟಿಕೊಳ್ಳದೆಯೇ ಶಿವನ ಆರಾಧಕರು ಎಂಬುದೇ ಆಗಿದೆ. ಆದ್ದರಿಂದ ಶಾಂತಿಮಯ ಮುತ್ತಯ್ಯ ಶಿವಭಕ್ತ ಗುರುಭಕ್ತರೊಡನೆ ಸಂಚಾರ ಕೈಕೊಂಡು ಸಮಾಜ ಹಿತ ಕಾರ್ಯವನ್ನು ಮಾಡುತ್ತಾ ಕೊಲ್ಲಿಪಾಕಿ ಸೀಮೆಯಲ್ಲಿ ಕೆಲವು ಕಾಲ ತಂಗಿದ. ಆಗ ಕೊಲ್ಲಿ ಪಾಕಿ ಕನ್ನಡನಾಡಿನ ಭಾಗವೇ ಆಗಿತ್ತು."[೨]

ಹರಿಹರ ತನ್ನ "ರೇವಣಸಿದ್ಧೇಶ್ವರ ದೇವರ ರಗಳೆ" ಎಂಬ ಕೃತಿಯಲ್ಲಿ "ರೇವಣಸಿದ್ಧೇಶ್ವರ ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿ ಉದ್ಭವವಾದ" ಎಂದು ಹೇಳಿ, ಮೌಡ್ಯಾಧಿಪತಿಗಳ ವಿವೇಚನೆಯನ್ನು ನಿಕಷಕ್ಕೊಡ್ಡಿದ್ದಾನೆ. ಅವನು ಮುಂದುವರಿದು ದೇವಸ್ಥಾನದ ತುಂಬ ಭಕ್ತಾದಿಗಳು ನೆರೆದಿದ್ದುದನ್ನೂ ವಾದ್ಯಗಳು ಘೋಷಿಸುತ್ತಿದ್ದದನ್ನೂ ತೆರೆಸರಿದಾಗ ರೇವಣಸಿದ್ಧನ ವೇಷಭೂಷಣಗಳನ್ನು ಹೀಗೆ ವರ್ಣಿಸಿದ್ದಾನೆ. "ಕಂತೆಯ ಕಮನೀಯ ರೂಪಂ, ವಜ್ರಕುಂಡಲದ ವಜ್ರಧರಂ, ಲಾಕುಳದ

ಲೋಕೈಕ ಬಂಧು, ಮೆಟ್ಟಿರ್ದ ಪಾವುಗೆಯ ಕಟ್ಟಧಿಕಂ, ಕೋವಣದ ಭಾವುಕಂ" ಹುಟ್ಟಿದಾಗಲೇ ಕಂತೆ (ಕಂಬಳಿ) ವಜ್ರಕುಂಡಲ (ಕಿವಿಯ ಆಭರಣ) ಲಕುಳ (ಯೋಗದಂಡ), ಪಾವುಗೆ, (ಮರದ ಪಾದರಕ್ಷೆ) ಕೋವಣ (ಲಂಗೋಟಿ) ಇರಲು ಸಾಧ್ಯವೇ? ದೇವಸ್ಥಾನದ ತುಂಬ ಜನಕಿಕ್ಕಿರಿದಿರಬೇಕಾದರೆ, ವಾದ್ಯಗಳು ಮೊಳಗುತ್ತಿರಬೇಕಾದರೆ ಸೋಮೇಶ್ವರ ದೇವಸ್ಥಾನದಲ್ಲಿ ಜರುಗುವ ಯಾವುದೋ ಒಂದು ಸಂಸ್ಕಾರ ಕ್ರಿಯೆಯ ಸಮಾರಂಭವದು ಎಂಬುದು ಸ್ಪಟಿಕ ಸ್ಪಷ್ಟ.

ಬಹುಶಃ ಚಿಕ್ಕಂದಿನಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡ ರೇವಣಸಿದ್ಧನಾಥ. ಪಂಥದ ಸಿದ್ಧರ ಪರಿಚಯವಾಗಿ ಉತ್ತರ ಭಾರತದಲ್ಲೆಲ್ಲ ಸಂಚರಿಸಿದ ವಿಷಯ "ನವನಾಥರ ಚರಿತ್ರೆ" ಎಂಬ ಗ್ರಂಥದಿಂದ ತಿಳಿಯುತ್ತದೆ. ಬಂಧುಲ ಎಂಬ ಗ್ರಾಮದಲ್ಲಿ ಅನ್ನಸತ್ರ ಇಟ್ಟು ನಡೆಸುತ್ತಿದ್ದುದನ್ನೂ ಆ ಗ್ರಂಥ ಉಲ್ಲೇಖಿಸಿದೆ. ಬಹುಶಃ ನಾಥ ಪಂಥದ ಆಚಾರ ವಿಚಾರಗಳು ಪೂರ್ಣವಾಗಿ ಹಿಡಿಸದೆ ಶೈವಸಿದ್ಧರಾದ ಪರಕ್ರಿಯೆ ಕೊಲ್ಲಿಪಾಕಿಯ ಸೋಮೇಶ್ವರ ದೇವಸ್ಥಾನದಲ್ಲಿ ಜರುಗಿರಬೇಕು.

'ನಾಥ'ಸಿದ್ಧರಿಗೂ ರೇವಣ, ಅಲ್ಲಮ ಮೊದಲಾದ ಶೈವ ಸಿದ್ಧರಿಗೂ ಸಂಬಂಧವಿದ್ದಿರಬೇಕು. ಇವರೆಲ್ಲರೂ ಹಿಂದೆ ನಾಥಸಿದ್ಧರೇ ಆಗಿದ್ದರು ಎಂದು ಪ್ರೊ. ಕುಂದಣಗಾರ, ಕಪಟರಾಳ ಕೃಷ್ಣ ರಾಯ ಮೊದಲಾದ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಯೋಗಿವರೇಣ್ಯ ಕುರುಬ ಜನಾಂಗದ ಪ್ರಸಿದ್ಧ ವಚನಕಾರ ಸೊನ್ನಲಿಗೆಯ ಸಿದ್ಧರಾಮೇಶ್ವರನೂ ಮೊದಲ ಸಿದ್ಧನಾಗಿದ್ದನೆಂಬುದಕ್ಕೆ ರಾಘವಾಂಕ ಬರೆದ 'ಸಿದ್ಧರಾಮ ಚಾರಿತ್ರ್ಯ' ಗ್ರಂಥದಲ್ಲಿ ಎರಡು ಮೂರು ಕಡೆ 'ಸಿದ್ಧರಾಮನಾಥ' ಎಂದು ಬಳಸಿರುವುದು ಪುಷ್ಟಿಯನ್ನು ನೀಡುತ್ತದೆ. "ಸಿದ್ಧರಾಮನಾಥಂ ಶೈವಸಾಮ್ರಾಜ್ಯಂ ಸುಖ"ದಲ್ಲಿದ್ದನೆಂಬ ಮಾತು ನಾಥಸಿದ್ಧರ ಸಂಪರ್ಕ ಹೊಂದಿಯೂ ಶೈವಸಿದ್ಧನಾಗಿದ್ದ ಎಂಬುದನ್ನು ಸೂಚಿಸುತ್ತದೆ. ಏಕೆಂದರೆ ಕರ್ನಾಟಕದಲ್ಲಿ ಬೌದ್ಧಸಿದ್ಧರು ನಾಥತಸಿದ್ಧರು, ಶೈವಸಿದ್ಧರು ಇದ್ದರು. ಇವರಿಗೆ ಪರಸ್ಪರ ಪರಿಚಯವಿದ್ದಿರಬೇಕು ಎಂಬ ಕುಂದಣಗಾರ, ಕಪಟರಾಳ ಕೃಷ್ಣ ಅವರುಗಳ ಅಭಿಪ್ರಾಯವನ್ನು ಅಲ್ಲಗಳೆಯಲು ಸಾಧ್ಯವಿಲ್ಲ.

'ಸಿದ್ಧರು' ಎಂದರೆ ಆಧ್ಯಾತ್ಮ ವಿದ್ಯೆಯಲ್ಲಿ ಸಿದ್ಧಿಯನ್ನು ಪಡೆದವರು ಎಂದರ್ಥ. ಬಿಜಾಪೂರ ಜಿಲ್ಲೆಯಲ್ಲಿ ಅಮುಗಿಸಿದ್ಧ (ಅಮೋಘಸಿದ್ಧ) ಪರಂಪರೆಯ ದೇವಸ್ಥಾನಗಳು ಅಧಿಕವಾಗಿವೆ ಎಂದು ತಿಳಿದು ಬರುತ್ತದೆ. ಅಮುಗಿಸಿದ್ಧನ ಶಾಕಾಮಠವೊಂದು ಶಿರಹಟ್ಟಿ ಬಳಿಯ ಹುಲ್ಲೂರಿನಲ್ಲಿದೆ. ಅರಕೇರಿ, ಮದಭಾವಿ, ಮುಧೋಳ (ಮುದುವೊಳಲು)ಗಳಲ್ಲಿ ಇವರ ಹೆಸರಿನ ದೇವಾಲಯಗಳಿವೆ ಎಂದು ತಿಳಿದುಬರುತ್ತದೆ.

ಜಾತ್ರೆಯ ಕಾಲದಲ್ಲಿ ಆ ಭಾಗದಲ್ಲಿರುವ ಎಲ್ಲ ಸಿದ್ಧ ದೇವಾಲಯಗಳಿಂದ ಪಲ್ಲಕ್ಕಿಗಳು ಬಂದು ಅರಕೇರಿಯಲ್ಲಿ ಅಮುಗಿಸಿದ್ಧನಿಗೆ ಗೌರವ ಸಲ್ಲಿಸಿ ಹಿಂದಿರುಗುತ್ತವೆಯೆಂದು ಪ್ರತೀತಿ. "ಅಮುಗಿದೇವಯ್ಯನಿಗೆ 'ಅಮಾಕಸಿದ್ಧ' (ಅಮೋಘಸಿದ್ಧ) ಎಂದು ಕರೆಯುತ್ತಿದ್ದರೆಂದೂ, ಬಿಜಾಪೂರ ಪ್ರಾಂತ್ಯದಲ್ಲಿ ಅನೇಕ ಕುರುಬರು ಲಿಂಗಧಾರಿಗಳಾಗಿರುವರೆಂದೂ, ಅವರು ಅಮಾಕಸಿದ್ಧನಲ್ಲಿ ಬಹಳ

ಭಕ್ತಿ ಇಟ್ಟಿರುವರೆಂದೂ, ಕುರುಬರು ಲಿಂಗಧಾರಿಗಳಾಗಿ ಪ್ರಸಿದ್ಧರಾಗಲಿಕ್ಕೆ ಅಮುಗಿದೇವಯ್ಯ (ಅಮಾಕಸಿದ್ಧ)ನೇ ಕಾರಣವೆಂದೂ ರಾ. ಸಾ. ಹಳಕಟ್ಟಿಯವರು ಅಭಿಪ್ರಾಯಪಡುತ್ತಾರೆ. ಅಮಾಕಸಿದ್ಧನ ಪ್ರಸಿದ್ಧಿಗೆ ರೇವಣಸಿದ್ಧ ಕಾರಣನಾದುದರಿಂದ ಅವನನ್ನು 'ಕುರುಬರ ಕುಲಗುರು' ಎಂದು ಪರಿಗಣಿಸಲಾಗುತ್ತದೆ. ಕುರುಬರ ಬೆಡಗು (ಕುಲ)ಗಳಲ್ಲಿ 'ಸಿದ್ಧಕುಲ' ಎಂಬುವುದೊಂದು ಇರುವುದರಿಂದ, ಅದರ ಅಸ್ತಿತ್ವಕ್ಕೆ ಬಹು ಮಟ್ಟಿಗೆ ರೇವಣಸಿದ್ಧ ಹಾಗೂ ಅಮುಗಿಸಿದ್ಧರೇ ಕಾರಣ ಎಂಬುದನ್ನು ಮರೆಯುಂತಿಲ್ಲ.

ಕುರುಬರ ಕುಲಗುರುವಾದ ರೇವಣಸಿದ್ಧೇಶ್ವರನಿಗೆ ರೇಣುಕಾಚಾರ್ಯ, ಸಿದ್ಧೇಶ್ವರ, ಕರಿಸಿದ್ಧೇಶ್ವರ, ಕಾಡಸಿದ್ಧೇಶ್ವರ, ಚೆನ್ನಮಲ್ಲೇಶ, ಮಳೆಯ ಮಲ್ಲೇಶ, ಸಿದ್ಧರ ಮಲ್ಲಯ್ಯ, ದೊಡ್ಡಯ್ಯ ಭೀಮೇಶ್ವರ, ಡಿಳ್ಳಿಯಪ್ಪ ಎಂಬ ಹತ್ತಾರು ಹೆಸರುಗಳಿವೆ.

ಬೆಂಗಳೂರು ಜಿಲ್ಲೆಯ ನೆಲಮಂಗಲದಲ್ಲಿ ದೊಡ್ಡಯ್ಯ ಚಿಕ್ಕಯ್ಯನ ದೇವಸ್ಥಾನಗಳಿವೆ. ಅವುಗಳ ಜಾತ್ರೆ ನಡೆಯುತ್ತದೆ. ರೇವಣಸಿದ್ಧೇಶ್ವರನಿಗೆ ದೊಡ್ಡಯ್ಯನೆಂದೂ ಅವನ ಮಗ ರುದ್ರಮುನಿಗೆ ಚಿಕ್ಕಯ್ಯನೆಂದೂ ಜನ ಪೂಜಿಸುತ್ತಾರೆ. ಭೀಮೇಶಾದ್ರಿ ಪುರಾಣ ಎಂಬ ಗ್ರಂಥದಲ್ಲಿ ಚಾಮರಾಜ, ರೇವಣಸಿದ್ಧೇಶ್ವರ ಬೆಟ್ಟಕ್ಕೆ ಕೆಳಗಿನಿಂದ ಮೇಲಿನ ಕುಂಬಿಯ ವರೆಗೂ ಮೆಟ್ಟಿಲು ಕಟ್ಟಿಸಿ, ಆನೇಕಲ್ ರಾಜಾಪುರದ ದೊಡ್ಡ ರೇವಣಾರಾಧ್ಯರ ಸಾನಿಧ್ಯದಲ್ಲಿ ಶಿವಲಿಂಗಗಳ ಪ್ರತಿಷ್ಠಾಪಣಾ ಕಾರ್ಯ ಜರುಗಿಸಿದನೆಂದು ಉಲ್ಲೇಖವಾಗಿದೆ.

**ಕಾಲ :**

ರೇವಣಸಿದ್ಧೇಶ್ವರ ೧೦೭ ವರ್ಷಗಳ ಕಾಲ ಬದುಕಿದ್ದನೆಂದು ಪ್ರತೀತಿ. ಆರ್ಷೇಯ ಕಾಲದಿಂದಲೂ ಕುರುಬ ಜನಾಂಗದಲ್ಲಿ ಹರಿದು ಬಂದಿರುವುದರಿಂದ ಅವನು ಸುಮಾರು ೧೧೧೦ ರಲ್ಲಿ 'ಕೊಲ್ಲಿಪಾಕಿ'ಯಲ್ಲಿ ಜನಿಸಿ ೧೨೧೭ರಲ್ಲಿ ಕೊಲ್ಲಿಪಾಕಿಯಲ್ಲೇ ಸಮಾಧಿಯಾದನು ಎಂದು ಭಾವಿಸಬಹುದು.

ಆದರೆ ಹರಿಹರ ತನ್ನ "ರೇವಣಸಿದ್ಧೇಶ್ವರ ದೇವರ ರಗಳೆ" ಎಂಬ ಕೃತಿಯಲ್ಲಿ 'ಅರಿದೇಳುನೂರು ಅರಿಯದೇಳುನೂರು ವತ್ಸರಂ ನೆರೆಸಂದುದು' ಎಂದು ಮುಂಡಿಗೆಯೋಪಾದಿ ಉಭಯಾರ್ಥವನ್ನು ಮಂಡಿಸಿರುವುದರಿಂದ ಮೌಢ್ಯಾಧಿಪತಿಗಳು ರೇವಣಸಿದ್ಧೇಶ್ವರ ೧೪೦೦ ವರ್ಷ ಬದುಕಿದ್ದ ಎಂದು ಹೇಳುತ್ತಾರೆ. ವತ್ಸರ ಎಂಬುದಕ್ಕೆ ವರ್ಷ, ಸಾಲು (year) ಎಂಬ ಅರ್ಥವಿರುವಂತೆಯೇ ದೇಶ ಖಂಡ ಎಂಬ ಅರ್ಥವೂ ಇದೆ. ಉದಾಹರಣೆಗೆ ಭರತವರ್ಷ ಎಂದರೆ ಭಾರತದೇಶ ಎಂದೇ ಅರ್ಥ. ನಾಥ ಪಂಥದಲ್ಲಿದ್ದಾಗ ಸಂಚಾರ ಮಾಡುತ್ತಾ ವಿಂಧ್ಯಪರ್ವತದ ಆಚೆಗಿರುವ ಉತ್ತರ ಭಾರತದ ಅಪರಿಚಿತ ಏಳುನೂರು ಗ್ರಾಮ ಪಟ್ಟಣಗಳಿಗೆ ಭೇಟ್ಟಿ ಕೊಟ್ಟಿದ್ದನೆಂದೂ, ಶೈವಸಿದ್ಧನಾದ ಮೇಲೆ ವಿಂಧ್ಯಪರ್ವತದ ಈಚೆಗಿರುವ ದಕ್ಷಿಣ ಭಾರತದ ಪರಿಚಿತ ಏಳುನೂರು ಗ್ರಾಮ, ಪಟ್ಟಣಗಳಿಗೆ ಭೇಟ್ಟಿ ಕೊಟ್ಟಿದ್ದನೆಂದೂ ಹೇಳುವುದನ್ನು ಹರಿಹರ ಹಾಗೆ ಊಭಯಾರ್ಥದ ದಾಟಿಯಲ್ಲಿ ಹೇಳಿದ್ದಾನೆ ಎಂದು ಊಹಿಸಬೇಕು.

ಆದ್ದರಿಂದ ಅವಿದ್ಯಾವಂತ ಹಳ್ಳಿಗಾಡಿನ ಜನ ಮನುಷ್ಯನ ಗರಿಷ್ಠ ಆಯುಸ್ಸು ಸಾಮಾನ್ಯವಾಗಿ ನೂರು ವರ್ಷ ಎಂದು ಭಾವಿಸಿದಾಗ ವಿದ್ಯಾವಂತ ಸಂಪ್ರದಾಯಸ್ಥರು ರೇವಣಸಿದ್ಧ ೧೪೦೦ ವರ್ಷ ಬದುಕಿದ್ದನು ಎಂದು ಹೇಳುವುದಾಗಲೀ, ಪಂಚಾಚಾರ್ಯ ಪರಂಪರೆಯವರು ೫೦೦೦ ವರ್ಷಗಳ ಹಿಂದೆ ಬದುಕಿದ್ದರು ಎಂದು ಹೇಳುವುದಾಗಲೀ ಅಥವಾ ಚತುರಾಚಾರ್ಯರು ಯುಗಕ್ಕೆ ಒಬ್ಬರಂತೆ ಇದ್ದರೆಂದೂ, ಪೂರ್ವಾಚಾರ್ಯರಾದ ರೇವಣಸಿದ್ಧ ಕೃತಯುಗದವರೆಂದು ಹೇಳುವುದಾಗಲೀ ತಲೆಬುಡ ಇಲ್ಲದ ಮಾತುಗಳು. ಏಕೆಂದರೆ ರೇವಣಸಿದ್ಧ ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣ, ಅಲ್ಲಮಪ್ರಭು, ಸಿದ್ಧರಾಯರ ಸಮಕಾಲೀನರಾಗಿ ಬಾಳಿದವರು ಎಂಬುದಕ್ಕೆ ಸಾಕ್ಷ್ಯಾಧಾರಗಳು ಸಿಕ್ಕುತ್ತವೆ. ಶ್ರೀ ರೇವಣಸಿದ್ಧೇಶ್ವರರ ಗುಡಿಗಳು ಹಿಡಕಲ್ಲ, ಬೆಂಡವಾಡ ಮುಂತಾದವುಗಳ ಕಡೆ ಕಾಣ ಸಿಗುತ್ತವೆ.

### ೨.೨.೬ ಶ್ರೀ ಮಾಳಿಂಗರಾಯ :

ಹುಲಜಂತಿಯ – ಸಿದ್ಧಮಾಳಿಂಗರಾಯ ಅಥವಾ ಮಾಳಪ್ಪ ಮಾಳಿಂಗೇಶ್ವರ ಎಂಬ ಹೆಸರಿನಿಂದ ಪ್ರಖ್ಯಾತಿಯನ್ನು ಪಡೆದಿರುವ ಮಾಳಿಂಗರಾಯನು ಅದ್ಭುತ ಪವಾಡಗಳನ್ನು ಮಾಡಿ ವೀರಮಾಳಿಂಗರಾಯ, ಮಹಿಮಾವಂತಃ ಮಾಳಿಂಗರಾಯವೆಂದು ಹಾಲುಮತದಲ್ಲಿ ನಂಬಲಾಗಿರುವ ದೇವರು.

ಸಿದ್ಧ ಮಾಳಿಂಗರಾಯನ ಮೂಲ ದೇವಸ್ಥಾನವು ಖತ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲಾ ಮಂಗಳ ವೇಡಾ ತಾಲೂಕಿನ 'ಹುಲಜಂತಿ' ಎಂಬ ಗ್ರಾಮದಲ್ಲಿದೆ. ಈ ದೇವಸ್ಥಾನವು ಮಾಳಿಂಗರಾಯನ ಸಮಾಧಿಯನ್ನೊಳಗೊಂಡ ಮೂಲ ಗದ್ದುಗೆ ಮೇಲೆ ನಿರ್ಮಾಣಗೊಂಡಿದೆ. ಈ ದೇವಸ್ಥಾನವು ಹಾಲುಮತದ ಪವಿತ್ರ ಕ್ಷೇತ್ರವೆಂದು ಭಕ್ತರು ನಂಬಿದ್ದಾರೆ.

ತಂದೆ ತುಕ್ಕಪ್ಪರಾಯ, ತಾಯಿ ಅಮೃತಬಾಯಿ, ಸೋಮರಾಯ ತಂದೆ–ತಾಯಿ ಕನಬಾಯಿ ಉದರದಿಂದ ಜಕ್ಕಪ್ಪ–ಮಾಳಪ್ಪ, ಇಬ್ಬರು ಅಣ್ಣತಮ್ಮಂದಿರರು ದಿನದಿಂದ ದಿನಕ್ಕೆ ಬಿದಿಗೆಯ ಚಂದ್ರನಂತೆ ಬೆಳೆಯ ತೊಡಗಿದರು. ಇವರ ಮನೆಯ ದೇವರನ್ನಾಗಿ ಗುರು ಸೋನಾರಿ ಸಿದ್ಧನನ್ನು ಮಾಡಿಕೊಂಡು ಭಕ್ತಿಯಿಂದ ಧ್ಯಾನಿಸುತ್ತಾ ಕಾಲ ಕಳೆಯುತ್ತಿದ್ದರು.

**ಮಾಳಿಂಗರಾಯ, ಜಕ್ಕಪ್ಪ ಮಾಡಿದ ಪವಾಡಗಳು :**

ಸೋನಾರಿಸಿದ್ಧ ತುಕ್ಕಪ್ಪರಾಯ ಸೋಮರಾಯರ ಗುರು ಏಳುನೂರು ಕಿಲ್ಲಾರ ಜೋಪಾನ ಮಾಡುತ್ತಿದ್ದರು. ಸೃಷ್ಟಿಯ ಆಟದ ಪ್ರಕಾರ ಆಕಳು ಮೇಯಿಸುವ ನಾಡಿಗೆ

ಬರಗಾಲ ಬಿದ್ದಿತು. ಗುರು ಯಾರು ಆಕಳು ಕಾಯುತ್ತೀರಿ? ಎಂದಾಗ ತುಕ್ಕಪ್ಪರಾಯ ಸೋಮರಾಯ ಆಕಳಗಳನ್ನು ಮೇಯಿಸಲು ಒಪ್ಪಿ ಏಳುನೂರು (೭೦೦) ಬಾಲ ಜನಿಗೆಗಳನ್ನು ತೆಗೆದುಕೊಂಡು ಹೋಗುತ್ತಾರೆ.

ಆಗ ಮಾಳಿಂಗರಾಯ, ಜಕ್ಕರಾಯ ೭-೮ ವರ್ಷದವರಿರುತ್ತಾರೆ. ಇವರ ಮನೆಯಲ್ಲಿ ಬಿಡುತ್ತಾರೆ. ತಾಯಿಯೊಂದಿಗೆ ಆಕಳು ಕಾಯುವಾಗ ಕೆಟ್ಟ ಬ್ಯಾಡರು ಅಡವಿಯಲ್ಲಿ ಇವರಿಗೆ ಕಾದಾಟ ಪ್ರಾರಂಭ ಮಾಡಿದಾಗ ಬ್ಯಾಡರಿಂದ ಸಾಯಬಾರದು, ಕೆಟ್ಟಬ್ಯಾಡರ ಸಹವಾಸ ಬೇಡವೆಂದು ತಾನೇ ಬಾನ ಹೊಡೆದುಕೊಳ್ಳುತ್ತಾನೆ. ಇದನ್ನು ಸೋಮರಾಯ ಮತ್ತು ಶಿವನ ಸಲಗದ ಗೂಳಿ (ಆಕಳು) ಈ ಸುದ್ದಿಯನ್ನು ಮಾಳಿಂಗರಾಯ ಜಕ್ಕಪ್ಪನ ತಾಯಿ ಕನಬಾಯಿಗೆ ಗೊತ್ತಾದ ಕೂಡಲೇ ಏನು ಅನಾಹುತವಾಯಿತೆಂದು ಅಡವಿಗೆ ಬರುತ್ತಾರೆ. ನೋಡುವುದರಲ್ಲಿಯೇ ಜೀವ ಹೋಗುವ ಸಂಭವವಿರುತ್ತದೆ. ತುಕ್ಕಪ್ಪರಾಯ ತನ್ನ ಜೀವದ ಕೊನೆ ಗಳಿಗೆಯಲ್ಲಿ ಮಕ್ಕಳ ಮುಂದೆ ಈ ೭೦೦ ಜನ ಬೇಡರನ್ನು ಸಂಹಾರ ಮಾಡಿ ನನ್ನ ಸಮಾಧಿ ಮುಂದೆ ಅಂದರೆ ಉಪಾಧ್ಯಾಯರ ಹಟ್ಟಿಗೆ ತಂದು ಸಮಾಧಿ ಆಗಬೇಕು ಎಂದರು.

“ತಂದೆಯ ವಚನದಂತೆ ಮಾಳಿಂಗರಾಯ ಜಕ್ಕಪ್ಪ ಅಣ್ಣ ತಮ್ಮಂದಿರರು ಗುರು ಸೋನಾರಿಸಿದ್ಧನ ಆಶೀರ್ವಾದದಿಂದ ೭೦೦ ಜನ ಬೇಡರನ್ನು ಕೊಂದು ತಂದು ದೇಹ ಮತ್ತು ರುಂಡ ಬೇರ್ಪಡಿಸಿ ರುಂಡಗಳನ್ನು ಮಾತ್ರ ತಂದು, ತಂದೆಗೆ ಕೊಟ್ಟ ವಚನದಂತೆ ನೆಲದಲ್ಲಿ, ತಗ್ಗು ತೆಗೆದು ಅದರಲ್ಲಿ ರುಂಡಗಳನ್ನು ಹಾಕಿ ಅದರ ಮೇಲೆ 'ಚಕ್ರಗಟ್ಟಿ' ಭಾರತ ಹುಣ್ಣಿಮೆಯ ದಿನ ಬೆಳಿಗ್ಗೆ ನಾಲ್ಕು ಗಂಟೆ ಮೂವತ್ತು ನಿಮಿಷಕ್ಕೆ ಹನ್ನೊಂದು ಜನ ರುದ್ರರೊಂದಿಗೆ ಸೇರಿಕೊಂಡು ಮಾಳಿಂಗರಾಯ ಭವಿಷ್ಯ ನುಡಿಯುತ್ತಾನೆ”.[೧೩]

ಮಾಳಿಂಗರಾಯ ಬೀರಪ್ಪನನ್ನು ಗುರುಮಾಡಿಕೊಂಡು ಹಲವಾರು ಪವಾಡಗಳನ್ನು ಮಾಡಿರುವನು ಘೊಡಗೇರಿಯಲ್ಲಿ ೧೨ ವರ್ಷ ಕಳೆದು ಗುಡ್ಡದಲ್ಲಿ ತಪಸ್ಸಿಗೆ ಕುಳಿತನು. ಇವರ ತಪಸ್ಸಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ ಏನುಬೇಕು ಬೇಡು ಎಂದು ಕೇಳಿದಾಗ ಬೀರಪ್ಪ ಸವೆಯಲಾರದ ಶಿಷ್ಯಮಗನನ್ನು ಕೊಡಬೇಕೆಂದನು.

ಆಗ ಶಿವನು ಮಾಳಪ್ಪ, ಜಕ್ಕಪ್ಪ ಇಬ್ಬರು ಅಣ್ಣ ತಮ್ಮಂದಿರರು ಅವರಲ್ಲಿ ಮಾಳಿಂಗರಾಯನನ್ನು ಪಡೆದುಕೊಳ್ಳಲು ಸೂಚಿಸಿದನು. ಅದೇ ಪ್ರಕಾರ ಡೋಣಜ ಕೆರೆಯ ಹತ್ತಿರ ಗುರು-ಶಿಷ್ಯರು ಕೂಡುವರು. ಮಾಳಿಂಗರಾಯರು ಗುರುವಿನ ಸೇವೆ ಮಾಡುತ್ತ ಮನೆಯ ಕಡೆ ಮರೆಯುವರು. ಆಗ ಜಕ್ಕಪ್ಪನನ್ನು ವಿಚಾರಿಸಿದಾಗ ಆತ ಗುರುವಿನೊಂದಿಗೆ ಕೂಡಿಕೊಂಡಿದ್ದಾನೆ ಎಂದಾಗ ತಾಯಿ ನೋಡಲು ಡೋಣಜ ಕೆರೆಗೆ ಬರುತ್ತಾಳೆ. ಆಗ ಕೆರೆಯ ಒಳಗಿಂದ ಗುರುವಿನ ಕೈ ಹಿಡಿದುಕೊಂಡು ಮಾಳಪ್ಪ ಬರುವನು. “ಶಿವನೇ ನಮ್ಮಯ್ ದೇವರ್ ಬಂದಾರ್ ಬನ್ನಿರೆ” ಎಂದು ಎಲ್ಲರೂ ಸಂತೋಷಗೊಳ್ಳುವರು.

ಮಾಳಿಂಗರಾಯ ಸಿಡಿಯಾಣ ಅಥವಾ ಸಿರಡೋಣದಲ್ಲಿ (ತಾ॥ ಸಿಂದಗಿ) ಗುಡಿ ಕಟ್ಟಿಸುವುದಾಗಿ ಹೇಳಿದನು. ಸಿದ್ಧ ಮಾಳಿಂಗರಾಯನನ್ನು ಪರೀಕ್ಷಿಸಲು ಊಟಕ್ಕೆ ಹುಲಿ ಗಿಣ್ಣ ಆಟಕ್ಕೆ ಹುಲಿಮರಿ ಬೇಕೆಂದನು. ಗುರುವಿನ ಆಶೀರ್ವಾದವಿದ್ದರೆ ಸಾಕು ಎಂದು ಭಂಡಾರ ಚೀಲ ಕೈಗೆ ಹಾಕಿ ಸಿತಾಳ ಕೈಯಲ್ಲಿ ಹಿಡಿದು ಗುರುವಿಗೆ ನಮಸ್ಕಾರ ಮಾಡಿ ನಿಂಬಾಳ ಗುಡ್ಡಕ್ಕೆ ಹೋದನು.

ಗವಿಯೊಳಗೆ ಹುಲಿ ನೋಡಿದಾಗ ದೊಡ್ಡ ಹುಲಿ ಇದ್ದಿರಲಿಲ್ಲ. ಮರಿಗಳು ಮಾತ್ರ ಇದ್ದವು. ಅಲ್ಲಿಗೆ ನಾಗ (ಸರ್ಪ) ಅದೇ ವೇಳೆಗೆ ಗವಿಯೊಳಗೆ ಹೊಕ್ಕು ಮರಿಗಳನ್ನು ಕಚ್ಚಲು ಪ್ರಯತ್ನಿಸುತ್ತಿತ್ತು. ಇದನ್ನು ಮಾಳಣ್ಣ ನೋಡಿ ಭಂಡಾರ ಹೊಡೆದು ಸರ್ಪನ್ನು ತಿರುವಿದನು. ಅಷ್ಟರಲ್ಲಿ ದೊಡ್ಡ (ತಾಯಿ) ಹುಲಿ ಗದ್ದರಿಸುತ್ತ ಯಾರು ಗವಿಯಲ್ಲಿ ಎಂದು ತಿನ್ನಲು ಬಂದಿತ್ತು. ಆಗ ಮರಿ ಹುಲಿಗಳು ಇವನು ನಮ್ಮನ್ನು ಸರ್ಪದ ಬಾಯಿಂದ ಉಳಿಸಿದ್ದಾನೆ. ಅವನಿಗೆ ಏನು ಬೇಕಾದ ಸಹಾಯ ಮಾಡು ಎಂದಾಗ ನನ್ನ ಮಕ್ಕಳನ್ನು ಉಳಿಸಿಕೊಂಡಿದ್ದಿ ನಿನಗೆ ಏನು ಬೇಕು ಬೇಡು ಎಂದು ತಾಯಿ ಹುಲಿ ಕೇಳಿದಾಗ 'ನನ್ನ ಗುರು ಹುಲಿಯ ಗಿಣ್ಣ ಊಟಕ್ಕೆ ಬೇಡಿದ್ದಾನೆ ಎಂದಾಗ ಹುಲಿ ಅದಕ್ಕೆ ಒಪ್ಪಿ ಗಿಣ್ಣ ನೀಡಿದವು. ಮಾಳಪ್ಪ ಗುರುವಿನ ಕಡೆ ತಿರುಗಿದಾಗ ನಿನ್ನ ಗುರುವು ಸಂಶಯ ಪಡಬಾರದೆಂದು ತಾಯಿ ಮಕ್ಕಳು ಮಾಳಪ್ಪನ ಜೊತೆ ಬಂದು ಗುರುವಿಗೆ ಅರ್ಪಿಸಿದವು.' ಹುಲಿಯ ಹಾಲ ತಂದದ್ದರಿಂದ ಹುಲಿಜಂತಿಯಾಯಿತು. ಮೊದಲು ಇದಕ್ಕೆ ಜಾಗೃತಿಪುರವೆನ್ನುತ್ತಾರೆ. ಮಾಳಿಂಗರಾಯನ ಗುಡಿಯ ಎಡಕ್ಕೆ ಬಲಕ್ಕೆ ಈಗಲೂ ಹುಲಿಯ ಚಿತ್ರ ಇರುವುದು ಕಂಡು ಬರುವುದು.

ಗುರುಭಕ್ತಿ–ಸಿರಡೋಣ ಗ್ರಾಮದಲ್ಲಿ ಗುರು ಬೀರಪ್ಪನ ಸೇವೆ ಮಾಡುತ್ತಿದ್ದರು. ಡೊಳ್ಳು, ತಾಳ, ಜಾಗಟೆ ಇವುಗಳ ಸಪ್ಪಳ ಕೈಲಾಸದಲ್ಲಿರುವ ಶಿವ–ಪಾರ್ವತಿಗೆ ಗೊತ್ತಾಗುತ್ತದೆ. ಆಗ ಪಾರ್ವತಿ ನೋಡಿ ಬರುವೆನೆಂದು ಸಿರಡೋಣ ಗ್ರಾಮಕ್ಕೆ ಬರುವರು. ಬೇರೆ ರೂಪ ತೊಟ್ಟ, ಮುದುಕ, ಮುದುಕಿ ರೂಪ ಧಾರಣ ಮಾಡಿದ್ದರು. ಮಾಳಪ್ಪ ಗುರುತು ಹಿಡಿದು ಸೇವೆ ಮಾಡುವನು. ಇಷ್ಟಕ್ಕೆ ನಿನ್ನ ಸೇವೆ ಮುಗಿದಿಲ್ಲವೆಂದಾಗ ಏನು ಬೇಕಾದರೂ ಮಾಡುತ್ತೇನೆ ಎಂದನು. ಆಗ ಪಾರ್ವತಿ ಸಾಕು ಮಗನೆ ಏನು ಬೇಡತಿ ಬೇಡು ಎಂದಳು.

ಆಗ ಮಾಳಿಂಗರಾಯ "ಬಡವರಿಗೆ ಭಾಗ್ಯ ದೊರಕಲಿ ನನಗೆ ಬಡತನವಿರಲಿ." ಪ್ರತಿವರ್ಷ ದೀಪಾವಳಿಯ ಅಮವಾಸ್ಯೆಯ ದಿನದಂದು ಸರಿರಾತ್ರಿ ಸಮಯದ ಕಗ್ಗತ್ತಲಲ್ಲಿ ಕೈಲಾಸದಿಂದ ಬಂದು ನನ್ನ ಶಿಖರಕ್ಕೆ ಮುಂಡಾಸ (ಪೇಟಾ) ಸುತ್ತಿ ಭೆಟ್ಟಿಯಾಗಬೇಕೆಂದು ಬೇಡಿಕೊಂಡನು. ಅದೇ ಪ್ರಕಾರ ಪ್ರತಿವರ್ಷ ದೊಡ್ಡ ಪ್ರಮಾಣದ ಜಾತ್ರೆ ನಡೆಯುತ್ತದೆ. ಮುಂಡಾಸ ಸುತ್ತುತ್ತದೆ.

ಪವಾಡ ಪುರುಷ ಮಾಳಿಂಗರಾಯರ ದೇವಸ್ಥಾನಗಳು ಕಡಿಮೆ ಇದ್ದರೂ ಪ್ರತಿಯೊಂದು ಊರಲ್ಲಿ ಡೊಳ್ಳಿನ ಮೇಳದವರು. ಮಾಳಿಂಗರಾಯರ ಹಾಗೂ ಶ್ರೀ ಬಿರೇಶ್ವರರ ಚರಿತ್ರೆಯನ್ನು ಹಾಡುತ್ತಾನೆ. ಅವರು ಯಾವುದೇ ದೇವರ ಹೆಸರಿನಲ್ಲಿ ಡೊಳ್ಳಿನ ಗಾಯನ ಸಂಘದ ಹೆಸರಿಟ್ಟರೂ ಹಾಡುವುದು ಮಾತ್ರ ಮಾಳಿಂಗರಾಯರ ಮತ್ತು ಬೀರಪ್ಪನ ಇತಿಹಾಸವನ್ನೇ ಎಂದು ಹೇಳಬಹುದು.

### ೨.೨.೭ ಶ್ರೀ ಅರಣ್ಯಸಿದ್ಧೇಶ್ವರ :

ಹೊನ್ನಪ್ಪಗೌಡ ತಾಯಿ ಗಂಗಾಂಬಿ ಇವರ ಉಧರದಿಂದ ಜನಿಸಿದ ಆರು ಜನ ಪುಣ್ಯದ ಮಕ್ಕಳು ಕನಕನ ಮುತ್ಯಾ, ಖಣನಮುತ್ಯಾ ಅವಲಕ್ಕಿಮುತ್ಯಾ. ಸಣ್ಣ ಬಾಲ ಚೌಡಲಮುತ್ಯಾ ಹಾಳೂರ ಹವಳೂರ ಮುಂಜಿ ಪಟ್ಟಣದಲ್ಲಿ ಜನಿಸಿ ಆ ಪಟ್ಟಣದ ಗೌಡಕಿಯನ್ನು ಆಳುತ್ತಿದ್ದರು. ಆರು ಜನ ಅಣ್ಣತಮ್ಮಂದಿರಲ್ಲಿ ಬೇಧಭಾವ (ಕದನ) ಬಂದು ಆ ಸಂದರ್ಭದಲ್ಲಿ ಚೌಡಲಮುತ್ಯಾ ಮುಂಜಿಪಟ್ಟಣ ಬಿಟ್ಟು ಊರಿಂದೂರಿಗೆ ಅಲೆದಾಡುತ್ತ ಅನೇಕ ಕಷ್ಟಗಳನ್ನು ಅನುಭವಿಸುತ್ತ, ಪರಶಿವನ ನಾಮಸ್ಮರಣೆ ಮಾಡುತ್ತ ಇಂದಿನ ಬಿಜಾಪುರ ಜಿಲ್ಲೆಯ ಅರಕೇರಿ ಊರಿನ ಅಗಸಿ ಬಾಗಿಲಿಗೆ ಬಂದು ನಿಂತನು. ಆ ಅಗಸಿಯ ದ್ವಾರಪಾಲಕರು ಈತನನ್ನು ಊರ ಒಳಗೆ ಬಿಡದೆ ನೀನು ಯಾರು ? ಎಲ್ಲಿಂದ ಬಂದಿರುವೆ ? ಇಲ್ಲಿ ಯಾರನ್ನು ಬೆಟ್ಟಿಯಾಗಬೇಕು ? ಎಂದು ಕೇಳಿದಾಗ ಚೌಡಲ ಮುತ್ಯಾ ಈ ಗ್ರಾಮದ ಮಾನವ ದೇವತೆಯಾದ ಬಡವರ ಬಂಧುವಾದ ಅಮೋಘಸಿದ್ಧನನ್ನು ಬೆಟ್ಟಿಯಾಗಬೇಕು ಎಂದು ಹೇಳಿದನು. ಆಗ ಧ್ವಾರಪಾಲಕರು ಆತನನ್ನು ಒಳಗೆ ಬಿಡದೆ ಅಲ್ಲಿಯೇ ನಿಲ್ಲಿಸಿ ಈ ವಿಷಯವನ್ನು ಅಮೋಘಸಿದ್ಧನಿಗೆ ತಿಳಿಸಿದರು.

ಅಮೋಘಸಿದ್ಧ ಸಾಕ್ಷಾತ್ ತಾನೇ ಅಗಸಿ ಬಾಗಿಲವರೆಗೂ ಬಂದು ಚೌಡಲಮುತ್ಯಾನನ್ನು ಬರವಮಾಡಿಕೊಂಡು ತನ್ನ ಊರಲ್ಲಿಂಯ ಅರಮನೆಗೆ ಕರೆದೊಂಯ್ಯುತ್ತಿದ್ದನು. ಅದೇ ಮುಂಜಾನೆಯ ಸಮಯದಲ್ಲಿ ಅಮೋಘಸಿದ್ಧನ ಮಗಳಾದ ಜನ್ನವ್ವ (ರೇಬಕವ್ವ)ಳು ದೇವರ ಪೂಜೆಗೆಂದು ಮನೆಯಂಗಳದ ಹೂದೋಟದಲ್ಲಿ ಹೂ ಹರಿಯುತ್ತಿದ್ದಳು. ಆಗ ತಂದೆಯ ಜೊತೆಯಲ್ಲಿ ಬರುತ್ತಿರುವ ಸುಂಧರ ರೂಪ, ಚಲುವಿಕೆಯ, ಸದೃಢಕಾಯದ ಚೌಡಲಮುತ್ಯಾನನ್ನು ನೋಡಿದಳು. ಆ ಕ್ಷಣ ತನ್ನ ಕಾಯಕವನ್ನು ಮರೆತು ಆ ಚಲುವಿಕೆಯ ಚಲುವ ಚೌಡಲನ ರೂಪವನ್ನು ನೋಡಿ. ಆ ರೂಪಕ್ಕೆ ಮಾರು ಹೋಗಿ ನಾಚಿ ನೀರಿನಂತಾಗಿ ಮುಗುಳ್ನಗೆಯನ್ನು ಬೀರುತ್ತ ಮನೆಯೊಳಗೆ ಓಡಿಹೋದಳು. ಈ ದೃಶ್ಯವನ್ನು ನೋಡಿದ ಅಮೋಘಸಿದ್ಧ ತನ್ನ ಮಗಳ ಅಭಿಲಾಷೆಯನ್ನು ತಿಳಿದುಕೊಂಡು ಈ ಚೌಡಲನನ್ನು ಮನೆಯ ಒಳಗೆ ಕರೆದುಕೊಂಡು ಹೋಗಿ, ಸಿಂಹಾಸನದ ಮೇಲೆ ಕುಳ್ಳಿರಿಸಿ, ಪವಿತ್ರಜಲದಿಂದ ಪಾದತೊಳೆದು, ಪಾದಪೂಜೆಮಾಡಿ ಕುಡಿಯಲು ಕೆನೆಬಂದ ಹಾಲು ನೀಡಿ, ತಿನ್ನಲು ತಂಪಾದ ಹಣ್ಣುಗಳನ್ನು ನೀಡಿ ಹೀಗೆ ಉಪಚರಿಸುತ್ತ ಈ ರೀತಿ ಪ್ರಶ್ನೆ ಮಾಡಿದನು. 'ಮಹಾನುಭಾವರೇ ತಮ್ಮ ಹೆಸರೇನು? ತಾವು ಯಾವ ಊರಿನವರು? ಇಲ್ಲಿಗೆ ಬಂದ ಕಾರಣವೇನು?' ಎಂದು ಕೇಳಿದನು.

ಈತ ನನ್ನ ಹೆಸರು ಚೌಡಲ ನನ್ನೂರು ಮುಂಜಿಪಟ್ಟಣ. ನನಗೆ ಐದು ಜನ ಅಣ್ಣಂದಿರು. ಅವರ ಜೊತೆ ಮನಸ್ತಾಪ ಬಂದು ಊರಿಂದೂರಿಗೆ ತಿರುಗಾಡುತ್ತ ಇಲ್ಲಿಗೆ ಬಂದೆ. ಈ ಊರಲ್ಲಿ ತಮ್ಮ ಹೆಸರು ಕೇಳಿ ಅತೀ ಆನಂದಭರಿತನಾಗಿ ಈ ಪರಶಿವನ ವರಮುತ್ರನಾದ ತಮ್ಮ ದರ್ಶನ ಪಡೆದುಕೊಂಡು

ತೆರಳಲು ಬಂದೆ. ಆದರೆ ಬರುವಾಗ ಹೂದೋಟದಲ್ಲಿ ತಮ್ಮ ಮಗಳನ್ನು ನೋಡಿ ಅವಳ ರೂಪಕ್ಕೆ, ಗುಣಕ್ಕೆ ಮನಸೋತೆ. ತಾವು ತಮ್ಮ ಮಗಳನ್ನು ನನಗೆ ಲಗ್ನ ಮಾಡಿಕೊಟ್ಟರೆ ತಮ್ಮ ಅಳಿಯನಾಗಿ ಇರುತ್ತೇನೆ ಎಂದು ಹೇಳಿದನು.

ಈ ಮಾತನ್ನು ಕೇಳಿ ಅಮೋಘಸಿದ್ಧನ ಮನಸ್ಸಿಗೆ ಅತೀ ಆನಂದವಾಗಿ, ತನ್ನ ಮಗಳಾದ ಜನ್ನವ್ವಳ ಒಪ್ಪಿಗೆಯನ್ನು ಪಡೆದು ಹಿರಿಯರ ಸಮಕ್ಷಮದಲಿ ಮದುವೆಯ ಲಗ್ನವನ್ನು ನಿಶ್ಚಯಿಸಿದರು. ಹಾದಿಗೆ ಹಂದರ ಹಾಕಿ, ಬೀದಿಗೆ ತಳಿರು-ತೋರಣಕಟ್ಟಿ ಹತ್ತಳ್ಳಿ ಜನರನ್ನು ಕರೆಯಿಸಿ, ದೇವದೇವತೆಗಳ ಸಮ್ಮುಖದಲ್ಲಿ ಎಲ್ಲರ ಆಶೀರ್ವಾದದೊಂದಿಗೆ ಮದುವೆ ಮಾಡಿದರು.

ಒಂದು ಸಲ ದೀಪಾವಳಿ ಹಬ್ಬಕ್ಕೆಂದು ತವರು ಮನೆಗೆ ಬಂದ ಜನ್ನವ್ವ ಅಣ್ಣಂದಿರರಿಗೆ ಆರತಿ ಬೆಳಗಿದಳು. ಆಗ ಅಣ್ಣ-ತಮ್ಮಂದಿರೆಲ್ಲರು ನಿನ್ನ ಆರತಿಯಲ್ಲಿ ಏನು ನೀಡಬೇಕೆಂದು ಕೇಳಿದರು. ಅಗ ಅವಳು "ಹರಿಯಲಾರದ ಸೀರೆ" ಕೊಡಿರೆಂದು ಕೇಳಿದಳು. ಆರತಿಯಲ್ಲಿ ಇರುವ ತಮ್ಮ "ಆಸ್ತಿ ಮತ್ತು ಗೌಡಕಿ" ದಾನವಾಗಿ ಜನ್ನವ್ವಳ ಹೆಸರಿಗೆ ಮಾಡಿದರು.

ಕನ್ನಮುತ್ತ್ಯಾನ ಕೊನೆಯ ಮಗನಾದ ಬ್ರಹ್ಮ ಒಡೆಯನಿಗೆ ಅಜ್ಜ ಹಾಗೂ ಅಜ್ಜಿಯ ಸೇವೆಗೆಂದು ಅರಕೇರಿಗೆ ಕಳಿಸಿಕೊಡಲಾಗಿತ್ತು. ಅಲ್ಲಿ ಅತ್ತೆ ಜನ್ನವ್ವ ಇವನನ್ನು ಎಮ್ಮೆಗಳ ಸಂರಕ್ಷಣೆಗೆ ಹಚ್ಚಿದಳು. ಅದರಲ್ಲಿ ಹೆಚ್ಚು-ಕಡಿಮೆಯಾದರೆ ಊಟಕ್ಕಿಂತ ಹೆಚ್ಚು ಬೈಗುಳುಗಳನ್ನೇ ತಿನ್ನಬೇಕಾಗುತ್ತಿತ್ತು. ತಮ್ಮನ ಸ್ಥಿತಿಯನ್ನು ತಿಳಿದ ಮಲಕಾರಿಸಿದ್ಧನು ಅರಕೇರಿಗೆ ಹೋಗಿ ಜನ್ನವ್ವಳ ಆಸ್ತಿ ಮತ್ತು ಗೌಡಕಿಯನ್ನು ಕಸಿದುಕೊಂಡನು. ಇದನ್ನು ನೋಡಿ ಜನ್ನವ್ವಳು ಇಲ್ಲಿ ಇರಬಾರದೆಂದು ಗಂಡನೊಂದಿಗೆ ಊರು ಬಿಟ್ಟು ಹೋಗುವುದನ್ನೇ ನಿರ್ಧರಿಸಿದಳು. ಅವಳು ಹೋಗುವಾಗ ಎಲ್ಲ ಆಸ್ತಿಯನ್ನು ಬಿಟ್ಟು. ಉಟ್ಟ ಅರಿವೆಯ ಮೇಲೆ ಅಡಿಗೆಯ ಸಾಹಿತ್ಯಗಳನ್ನು ಬುಟ್ಟಿಯಲ್ಲಿ ತೆಗೆದುಕೊಂಡು ಜಾಲಗೇರಿ ಸೀಮೆಯಲಿ ಬುಟ್ಟಿ ಇಟ್ಟು, ತಂದೆಗೆ ಭೆಟ್ಟಿಯಾಗಿ ಹೋಗಬೇಕೆಂದು ಅಮೋಘಸಿದ್ಧನ ಕಡೆಗೆ ಹೋದಳು. ಅಲ್ಲಿ ಅಳಿಯನು ಮಾಡಿದ ಕಥೆಯನೆಲ್ಲ ಹೇಳಿದಳು. "ಒಡೆಯರ ಆಸ್ತಿ ಶಿಸ್ತಿನಿಂದ ನಡೆದರೆ ಮಾತ್ರ ದಕ್ಕುತ್ತದೆ" ಎಂದು ಮೊದಲೇ ನಾನು ಹೇಳಿರಲಿಲ್ಲವೆ?", ಎಂದು ಅಮೋಘಸಿದ್ಧನು ನುಡಿದನು. ಆಗ ಜನ್ನವ್ವ ದುಃಖ ಮಾಡಿದಳು. "ನೀನು ಮೇಲು ನಾಡಿಗೆ ಹೋಗು ನಿನ್ನ ಕೀರ್ತಿ ಬೆಳೆಯುತ್ತದೆ" ಎಂದು ಹೇಳಿದನು.

ತಂದೆಯ ಆಶೀರ್ವಾದ ಪಡೆದು ಜನ್ನವ್ವ ತಾನಿಟ್ಟ ಗೃಹಪಯೋಗಿ ವಸ್ತುಗಳನ್ನು ಒಯ್ಯಬೇಕೆಂದು ಹೋಗಿ ಆ ಬುಟ್ಟಿಯನ್ನು ಎತ್ತಿದಳು. ಆಗ ಅದು ಮೇಲಕ್ಕೆ ಬರಲಿಲ್ಲ. ಆಗ ಆ ಬುಟ್ಟಿ ಬೇರು ಬಿಟ್ಟಿತ್ತು. ಅದನ್ನು ನೋಡಿ 'ಒಡೆಯರ ಒಂದೂ ವಸ್ತು ಸಿಗಲಿಲ್ಲ' ಎಂದು ತಿಳಿದು ದುಃಖಿಸುತ್ತ ಸತಿ-ಪತಿಗಳು ಮೇಲುನಾಡಿನ (ಪಶ್ಚಿಮ ದಿಕ್ಕು) ಕಡೆಗೆ ನಡೆದರು.

ದಂಪತಿಗಳಿಬ್ಬರೂ ಅರಕೇರಿಯಿಂದ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಸಪ್ತಸಾಗರ ಗ್ರಾಮಕ್ಕೆ ನಡೆದು ಬಂದರು. ಆಗ ಮಳೆಗಾಲದ ಸಂಜೆಯ ಸಮಯ, ಎಲ್ಲ ದಿಕ್ಕುಗಳಿಂದ ಮಳೆ ಬೀಸಿ ಬೀಸಿ ಜೋರಾಗಿ ಬೀಳುತ್ತಿತ್ತು. ಹೀಗಾಗಿ ಅದೇ ಗ್ರಾಮದಲ್ಲಿ ಒಂದು ದೊಡ್ಡ ಮರದ ಪೊಟರೆಯಲ್ಲಿಯೇ ನಿಂತು ಕಲ್ಲಿನ ಪಾತ್ರೆ, (ಗಂಗಾಳು) ತಯಾರು ಮಾಡಿ, ಗಾರ್ಗಲ್ಲಿನ ಅಣ್ಣ (ಅನ್ನಾ) ಮಾಡಿ ಊಟ ಮಾಡಿ ಮಲಗಿದರು.

ಮರುದಿನ ಬೆಳಿಗ್ಗೆ ಕೃಷ್ಣಾನದಿಯಲ್ಲಿ ಪವಿತ್ರ ಸ್ನಾನ ಮಾಡಿ ದೇವರ ಪೂಜೆ ಮುಗಿಸಿಕೊಂಡು ತಮ್ಮ ಮುಂದಿನ ಪ್ರಯಾಣ ಬೆಳಸಿ. ಬೆಳಗಾವಿ ಜಿಲ್ಲಾ ರಾಯಬಾಗ ತಾಲೂಕಾ ಭಿರಡಿ ಮಾರ್ಗವಾಗಿ ಯಕ್ಸಂಬಾ ನಗರಿಗೆ ಹೋದರು. ಯಕ್ಸಂಬಾ ನಗರಿಯ ಕರ್ಲಾಹೊಂಡಿ ಎಂಬ ಸ್ಥಳದಲ್ಲಿ ಮನೆಕಟ್ಟಿಕೊಂಡು ದಂಪತಿಗಳಿಬ್ಬರೂ ಜೀವನ ನಡೆಸುತ್ತಿದ್ದರು. ಮದುವೆಯಾಗಿ ಅನೇಕ ವರ್ಷಗಳಾದರೂ ಮಕ್ಕಳಾಗಿರಲಿಲ್ಲ. ತಾನು ಬಂಜೆ ಎಂಬ ಚಿಂತೆ ಅನುದಿನವೂ ಕಾಡುತ್ತಿತ್ತು. ತಾಯಿ ಜನ್ನವ್ವ ಕರ್ಲಹೊಂಡಿಯ ಮೇಲೆ ಶಂಕರಲಿಂಗವನ್ನು ಸ್ಥಾಪನೆ ಮಾಡಿ ಪ್ರತಿದಿನ ಮಕ್ಕಳ ಪ್ರಾಪ್ತಿಗಾಗಿ ಪೂಜಿಸುತ್ತಿದ್ದಳು. ಅದೇ ಸಮಯದಲ್ಲಿ ಗುರುಶಿಷ್ಯರಾದ ಅಥಣಿ ತಾಲೂಕಿನ ಮುರಗುಂಡಿಯ ಮುರಸಿದ್ಧ ಹಾಗೂ ಮಹಾರಾಷ್ಟ್ರದ ಕಡೋಲಿ–ವಿಠ್ಠಲರಾಯರು ಕೂಡಿಕೊಂಡು ದೇಶ ಸಂಚಾರ ಮಾಡುತ್ತ. ಆ ತಾಯಿ ಬಳಿಗೆ ಬಂದರು.

ಆಗ ಅಲ್ಲಿಗೆ ಬಂದ ಸಿದ್ಧರನ್ನು ಬರಮಾಡಿಕೊಂಡು ಪಾದಪೂಜೆ ಮಾಡಿ ಭಕ್ತಿಯಿಂದ ವಂದಿಸಿದಳು. ಆ ತಾಯಿಯ ಮುಖವನ್ನು ನೋಡಿದ ಆ ಸಿದ್ಧರಿಬ್ಬರೂ ಏಕೆ ತಾಯಿ ಮುಖದಲ್ಲಿ ದುಃಖವಿದೇ ? ನಿನ್ನ ಕೋರಿಕೆ ಏನು ? ಎಂದು ಕೇಳಿದರು. ಆಗ ತಾಯಿ ಜನ್ನವ್ವ ಮಕ್ಕಳಿಲ್ಲದ ತನ್ನ ಪಾಡನ್ನು ಕಣ್ಣೀರಿಡುತ್ತ ಹೇಳಿದಳು. ಇದನ್ನು ತಿಳಿದ ಗುರುಗಳಿಬ್ಬರು ಚಿಂತಿಸಬೇಡ ತಾಯಿ ವರ್ಷದೊಳಗೆ ನಿನಗೆ ಮಕ್ಕಳಾಗುತ್ತವೆ. ಆದರೆ ಗಂಡು ಹುಟ್ಟಿದರೆ ನಮ್ಮದು ಹೆಣ್ಣು ಹುಟ್ಟಿದರೆ ನಿಂದು ಎಂದು ವಚನ ತೆಗೆದುಕೊಂಡು ಮುಂದೆ ಸಾಗಿದರು.

ಪೂಜೆ–ಪುನಸ್ಕಾರಗಳೊಂದಿಗೆ ಜೀವನ ಕಳೆಯುತ್ತಿದ್ದಳು. ತಾಯಿ ಜನ್ನವ್ವ ಕೆಲವು ದಿನಗಳಲ್ಲಿ ಆ ಮಹಾತ್ಮರ ವರದಿಂದ ತಾಯಿ ಜನ್ನವ್ವ ಗರ್ಭವತಿಯಾದಳು. ನವಮಾಸಗಳು ತುಂಬಿ ನವದಿನಗಳು ಕಳೆದು ಅಂದು ಸುತ್ತಲಿನ ಆಕಾಸವೆಲ್ಲ ಕಪ್ಪು ಮೋಡಗಳಿಂದ ತುಂಬಿಕೊಂಡಿತ್ತು. ಗುಡುಗು–ಸಿಡಿಲು–ಮಿಂಚುಗಳು ಜೋರಾಗಿ ಅಪ್ಪಳಿಸುತ್ತಿದ್ದವು. ಮರ–ಗಿಡ–ಬಳ್ಳಿಗಳೆಲ್ಲ ಕಿತ್ತು ಬೀಳುವಂತೆ ಬಿರುಗಾಳಿ ಬೀಸಿ ಬೀಸಿ ಬರುತ್ತಿತ್ತು. ಭೂಮಂಡಲದ ತುಂಬೆಲ್ಲ ಆಹಾಕಾರ ತುಂಬಿಕೊಂಡಿತ್ತು. ಸೂರ್ಯ–ಚಂದ್ರ–ತಾರೆಗಳೆಲ್ಲ ಹಗಲಿರುಳೆನ್ನದೆ ಮಿನುಗುತ್ತಿದ್ದರು, ಭೂಮಂಡಲವೆಲ್ಲ ಗಡಗಡ ಎಂದು ನಡುಗುತ್ತಿತ್ತು. ಆ ಕ್ಷಣದಲ್ಲಿ ತಾಯಿ ಜನ್ನವ್ವಳಿಗೆ ನವಮಾಸದ ಬೇನೆ ಕಾಣಿಸಿಕೊಂಡಿತು. ದೇವ–ದೇವತೆಗಳೆಲ್ಲ ಆಕಾಶದಲ್ಲಿ ನಿಂತು ಹೂಮಳೆಗರಿಯುತ್ತಿದ್ದರು. ಆಗ ಪುಣ್ಯ ದಂಪತಿಗಳಾದ ತಂದೆ ಚೌಡಲಮುತ್ಯಾ ಮತ್ತು ತಾಯಿ ಜನ್ನವ್ವ ಇವರ ಪವಿತ್ರ ಉಧರದಿಂದ ಅವಳಿ ಗಂಡು ಮಕ್ಕಳಿಬ್ಬರು ಜನ್ಮತಾಳಿದರು.

"ಕಡೋಲಿಸಿದ್ಧ ಮುರಗುಂಡಿ ಗುರುವ ಶಿಷ್ಯಾರ
ಗುಡಿಯ ಕಟ್ಟುದುಕ ಏಳು ಬೆತ್ತಾ ಭೂಮಿ ಅಳದಾರ
ಅದೇ ಭೂಮ್ಯಾಗ ಏಳು ಮಕ್ಕಳು ತಾಯಿ ಇದ್ದಾಳ
ಕಟ್ಟಿದ ಗುಡಿಯು ರಾತ್ರಿ ಬೀಳತಿತ್ತ ಏನ ಚಮತ್ಕಾರ."

ಮಹಾರಾಷ್ಟ್ರದ ಕಡೋಲಿ ಪಟ್ಟಣದಲಿ ವಿಠ್ಠಲ ದೇವರು ಮುರಗುಂಡಿಯ ಮುರಸಿದ್ಧ ದೇವರು ಕೂಡಿಕೊಂಡು ಗುಡಿಯೊಂದನ್ನು ಕಟ್ಟುತ್ತಿದ್ದರು. ಆದರೆ ಅದೇ ಸ್ಥಳದಲ್ಲಿ ಏಳು ಮಕ್ಕಳ ತಾಯಿ ಖನ್ನೆರವ್ವ ಎಂಬ ರಾಕ್ಷಸ ವಾಸಿಸುತ್ತಿದ್ದಳು. ಇವರು ಹಗಲಿನಲ್ಲಿ ಕಟ್ಟಿದ ಗುಡಿಯನ್ನು ಆ ಭಯಂಕರ ಆಕಾರವುಳ್ಳ ರಾಕ್ಷಸಿಯು ರಾತ್ರಿ ವೇಳೆಯಲ್ಲಿ ಕೆಡವುತ್ತಿದ್ದಳು. ಇದರಿಂದ ಚಿಂತೆಗೊಳಗಾದ ವಿಠ್ಠಲನು ಗುರು ಮುರಸಿದ್ಧನ ಹತ್ತಿರ ಬಂದು ವಿಚಾರಿಸಿದನು. ಆಗ ಗುರು ಮುರಸಿದ್ಧನು ನಾವೀರ್ವರು ಆಶೀರ್ವಾದ ಮಾಡಿದ ಆ ತಾಯಿಗೆ ಮೊನ್ನೆ ಎರಡು ಜನ ಗಂಡು ಮಕ್ಕಳು ಜನ್ಮ ತಾಳಿದ್ದಾರೆ. ಅವರಲ್ಲಿ ಒಬ್ಬ ಮಗನಿಂದ ನಿನ್ನ ಗುಡಿಯ ಕಟ್ಟಡವಾಗುತ್ತದೆ. ನಡೆ ಹೋಗೋಣ ಎಂದನು.

ಆ ಮಹಾನುಬಾವರಿಬ್ಬರೂ ಸೇರಿ ಯಕ್ಸಂಬ ನಗರಿಯ ಕರ್‍ಲಾಹೊಂಡಿಗೆ ಬಂದರು. ಅಲ್ಲಿ ತಾಯಿ ಜನ್ನವ್ವಳ ಮಡಿಲಲ್ಲಿ ಆ ಮಕ್ಕಳೀರ್ವರೂ ಲಾಲಿ ಕೇಳುತ್ತ ಚಂಡಾಟದಲ್ಲಿ ತೊಡಗಿದ್ದರು.

ಮನೆಯಂಗಳದಲ್ಲಿ ಬಂದು ನಿಂತ ಸಿದ್ಧರನ್ನು ಸಂತೋಷದಿಂದ ಒಳಗೆ ಕರೆದು ಕೃಷ್ಣಾ ಜಲದಿಂದ ಪಾದ ತೊಳೆದು ಪಾದ ಪೂಜೆ ಮಾಡಿ, ಚೌಕಿ ಮನಿಯಿತ್ತು ಕುಳ್ಳಿರಿಸಿದಳು. ಆಗ ಗುರುಗಳಿಗೆ ಹಸಿವೆಯಾಗಿದ್ದರಿಂದ ಕುಡಿಯಲು ಹಾಲು ಕೊಡಬೇಕೆಂದು ಕೇಳಿದರು. ಅದರಿಂದ ತಾಯಿ ಜನ್ನವ್ವ ದುಃಖದಿಂದ "ಗುರುವರ್ಯರೇ ನನ್ನ ಕಷ್ಟವನ್ನು ನೋಡಲಾರದೆ ಮಹಾರಾಜ ಧರ್ಮರಾಯ ಒಂದು ಆಕಳನ್ನು ಕೊಟ್ಟನು. ಆದರೆ ಅದು ಹನ್ನೆರಡು ವರ್ಷಗಳಿಂದ ಹಾಲನ್ನೇ ಕೊಟ್ಟಿಲ್ಲವೆಂದು ತಿಳಿಸಿದಳು. ಇದರಿಂದ ಖತಿಜಗೊಂಡ ಗುರುಗಳು ತಾಯಿ ಚಿಂತಿಸಬೇಡ ಭಕ್ತಿಯಿಂದ ಹೋಗಿ ಹಾಲನ್ನು ಕರೆ ಎಂದರು. ಸಂತಸದಿಂದ ತಾಯಿ ದೇವರ ನಾಮಸ್ಮರಣೆ ಮಾಡುತ್ತ ಹಾಲು ಕರೆದು ಗುರುಗಳ ಹಸಿವಿನ ದಾಹ ಇಂಗಿಸಿದಳು."

ನಂತರ ಸಿದ್ಧರಿಬ್ಬರೂ "ತಾಯಿ, ಈ ಹಿಂದೆ ನಾವಿಲ್ಲಿಗೆ ಬಂದಾಗ ನೀನು ಪುತ್ರಸಂತಾನದ ಚಿಂತೆಯಲ್ಲಿದ್ದಿ. ಆಗ ನಾವು ನಿನಗೆ ಆಶೀರ್ವದಿಸಿ ಗಂಡು ಹುಟ್ಟಿದರೆ ಆ ಮಗು ನಮಗೆ ಕೊಡಬೇಕೆಂದು ಹೇಳಿದ್ದೇವು. ಅಂತೆಯೇ ಇಂದು ನಾನು ಜನಕಲ್ಯಾಣಕ್ಕಾಗಿ, ಗುಡಿಯೊಂದನ್ನು ಕಟ್ಟುತ್ತಿದ್ದೇನೆ. ಆದರೆ ಭಯಂಕರ ರಾಕ್ಷಸಿಯೊಂದು ಗುಡಿಯನ್ನು ಕೆಡುವುತ್ತಿದೆ. ಆದ್ದರಿಂದ ಆ ರಾಕ್ಷಸಿಯನ್ನು ಕೊಂದು ಗುಡಿಯನ್ನು ಕಟ್ಟಲು ನಿನ್ನ ಸಣ್ಣ ಮಗನಿಂದ ಮಾತ್ರ ಸಾಧ್ಯ" ಎಂದರು. ಆ ತಾಯಿ ಮಕ್ಕಳನ್ನು ಹಸುಳೆಗಳು ರಾಕ್ಷಸಿಯ ಜೊತೆ ಹೋರಾಡಲು ಕಳಿಸುವುದೆಂದರೇನು ? ಎಂದು ಕೇಳಿದಾಗ. ಅವರು "ತಾಯಿ, ಅದು ನಿನ್ನ ಮಗನಿಂದ ಮಾತ್ರ ಸಾಧ್ಯ. ಈಗ ನೀವು ಕಳಿಸಿಕೊಟ್ಟರೆ ಅದರಿಂದ ಅವನಿಗೆ ಇಹದಲ್ಲಿ

ಯಶಸ್ಸು, ನಿನಗೆ ಪರದಲ್ಲಿ ಉತ್ತಮ ಪದವಿ ದೊರೆಯುತ್ತದೆ" ಎಂದು ಹೇಳಿದರು. ಸಂತಸಗೊಂಡ ತಾಯಿ ತನ್ನ ಹಾಲ ಹಸುಳೆ ಚಿಕ್ಕ ಬಾಲನನ್ನು ಕಳಿಸಿಕೊಟ್ಟಳು.

ಗುರುಗಳಿಬ್ಬರೂ ಹಸುಳೆಯನೆತ್ತಿಕೊಂಡು ಕಡೋಲಿಯತ್ತ ಮುನ್ನಡೆದರು. ಇಂದಿನ ಚಿಕ್ಕೋಡಿ ತಾಲೂಕಿನ ಸದಲಗ ಗ್ರಾಮದ ಹತ್ತಿರ ಹರಿಯುತ್ತಿರುವ ನದಿಯ ಸಮೀಪಕ್ಕೆ ಬರುವಷ್ಟರಲ್ಲಿ ಮೂರು ದಿನಗಳ ಹಾಲ ಹಸುಳೆ ಬೆಳೆದು ಹನ್ನೆರಡು ಮರುಷದವನಷ್ಟು ದೊಡ್ಡವನಾದನು. ಅಲ್ಲಿ ಗುರುಗಳಿಂದ ಅತುಲ ಬಲ ಶಕ್ತಿಯ ಮಂತ್ರ ವಿದ್ಯೆಯನ್ನು ಕಲಿತು. ಮಹಾರಾಷ್ಟ್ರದ ಇಚಲಕರಂಜಿ-ಹಾತಕಲ್ಲಂಗಡಿ ಮಾರ್ಗವಾಗಿ ಕಡೋಲಿಗೆ ಆಗಮಿಸಿದರು. ಅಷ್ಟೋತ್ತಿಗೆ ಈ ಬಾಲಕ ಬೆಳೆದು ದೊಡ್ಡವನಾಗಿ ಭೂಮಿ ಆಕಾರದಷ್ಟಾದನು. ಅಷ್ಟೊತ್ತಿಗೆ ಕೂಲಿಯಾಳುಗಳು ಗುಡಿಯನ್ನು ಕಟ್ಟಿ ಮನೆಗೆ ಹೋಗುತ್ತಿದ್ದರು. ಆ ದಿನ ರಾತ್ರಿ ಅಲ್ಲಿಯೇ ಗುಡಿಯ ಹತ್ತಿರದಲ್ಲಿಯೇ ಕುಳಿತುಕೊಂಡನು. ರಾತ್ರಿ ೧೨ರ ಘಂಟೆಯ ಹೊತ್ತಿಗೆ ಆ ಭಯಂಕರ ರಾಕ್ಷಸಿ ಬಂದು ಕಟ್ಟಿದ ಗುಡಿಯನ್ನು ಒಂದೇ ಹೊಡೆತದಲ್ಲಿ ಕೆಡವಿದಳು. ಆಗ ಈ ಬಾಲಕ ಮತ್ತು ರಾಕ್ಷಸಿಯ ಮಧ್ಯ ಭಯಂಕರ ಯುದ್ಧ ನಡೆದು ಅವಳನ್ನು ಸೋಲಿಸಿದನು. ನಂತರ ಆ ರಾಕ್ಷಸಿಯಿಂದಲೇ ಕೆಸರನ್ನು ಕಲಿಸಲು ಹಚ್ಚಿ ಅವಳಿಂದಲೇ ಗುಡಿಯನ್ನು ಕೇವಲ ಅದೊಂದೇ ರಾತ್ರಿಯಲ್ಲಿ ಕಟ್ಟಿಸಿದನು. ಇದರಿಂದ ಸಂತಸಗೊಂಡ ಸಿದ್ಧ ವಿಠ್ಠಲ ಶಿಷ್ಯ ಇದರಿಂದ ನನಗೆ ಬಹಳ ಸಂತೋಷವಾಗಿದೆ. ನಿನಗೆ ನನ್ನಿಂದ ಕಾಣಿಕೆಯಾಗಿ ಏನುಬೇಕು ಕೇಳಿ ಎಂದನು. ಶಿಷ್ಯ ಗುರುವೆ ನೀವು ಕೊಡುವುದಾದರೆ ಈ ರಾಕ್ಷಸಿಯನ್ನೇ ನನ್ನ ನಿವಾಳಕಿ ಎಂದು ತಿಳಿದು ಕೊಡಬೇಕು.

ಎಂದು ಕೇಳಿ ಗುರುಗಳಿಂದ ಆ ರಾಕ್ಷಸಿ ಕನ್ನೇರವ್ವನನ್ನು ಪಡೆದು ಮರಳಿದನು. ಮುಂದೆ ಅದನ್ನು ರಾಯಬಾಗ ತಾಲೂಕ ಯಲ್ಪಾರಟ್ಟಿ-ಖೇಮಲಾಪೂರ ಸೀಮೆಯ ದಟ್ಟರಣ್ಯದಲ್ಲಿ ತಂದಿಟ್ಟನು.

ಹನ್ನೊಂದು ದಿನಗಳು ತುಂಬಿದಾಗ ಮಕ್ಕಳಿಗೆ ಹೆಸರಿಡಲು ಅರಕೇರಿಯಿಂದ ಕರ್ಲಾಹೊಂಡಿಗೆ ಜನರು ಬಂದರು. ಬಂಗಾರದ ತೊಟ್ಟಿಲಲ್ಲಿ ಮಕ್ಕಳನ್ನು ಹಾಕಿ ಗಂಧರ್ವಲೋಕದಿಂದ ಬಂದ ಗಂದರ್ವ ಸ್ತ್ರೀಯರು ತೋಟ್ಟಿಲನ್ನು ತೂಗುತ್ತಿದ್ದರು. ದೇವ-ದೇವತೆಗಳು ಆಕಾಶದಿಂದ ಹೂಮಳೆ ಕರೆಯುತ್ತ ಜಯಘೋಷಗಳು ಮೊಳಗುತ್ತಿದ್ದವು. ಸೂರ್ಯ ಚಂದ್ರಾದಿಗಳ ಸಾಕ್ಷಿಯಾಗಿ ಈ ಮಕ್ಕಳಿಬ್ಬರಿಗೆ ದೊಡ್ಡವನಿಗೆ ಮಲಕಾರಿಸಿದ್ಧನೆಂದು ಚಿಕ್ಕವನಿಗೆ ಅರಣ್ಯಸಿದ್ಧನೆಂದು ನಾಮಕರಣ ಮಾಡಿದರು.

ತಂದೆ-ತಾಯಿಗಳ ಅಪ್ಪಣೆಯನ್ನು ಪಡೆದು ಕಿಲ್ಲಾರಗಳನ್ನು ಕಾಯುತ್ತ ದೇಶ ಸಂಚಾರ ಹೊರಟು ನಿಂತನು. ಆಗ ತಾಯಿ "ಮಗುವೆ, ನೀನು ಹೀಗೆ ಹೋದರೆ ನಮ್ಮನ್ನು ನೋಡಿಕೊಳ್ಳುವವರಾರು? ಕಿಲ್ಲಾರಗಳನ್ನು ತೆಗೆದುಕೊಂಡು ಹೋದರೆ ಹಾಲಿಗೆ ಗತಿಯೇನು?" ಎಂದು ಕೇಳಿದಾಗ ಅರಣ್ಯಸಿದ್ಧೇಶ್ವರ "ತಾಯಿ, ಚಿಂತಿಸಬೇಡ ನೀನು ಕೂಗಿದಾಗ ನಿನ್ನ ಬಳಿಯಿರುವೆ. ಪ್ರತಿದಿನ ಈ ಗೂಳಿಯು ನಿಮಗೆ ಹಾಲನ್ನು ತಂದು ಕೊಡುತ್ತದೆ. ಹಾಗೂ ನಾನು ಸಿದ್ಧಾಟಕೆಯಲ್ಲಿರುವಾಗ ನನಗೆ ಏನಾದರೂ ಆದರೆ

ಗೂಳಿಯು ತರುವ ಹಾಲು ರಕ್ತವಾಗಿರುತ್ತದೆ. ಹಾಗೂ ಧರ್ಮರಾಯನ ಕಾಮಧೇನು ಕಲ್ಲಾಗುತ್ತದೆ" ಎಂದು ಹೇಳಿ ಕಿಲ್ಲಾರಗಳ ಹಿಂಡನ್ನು ಹೊಡೆದುಕೊಂಡು, ತಂದೆ-ತಾಯಿ, ಅಣ್ಣ ಮಲಕಾರಿಸಿದ್ಧನನ್ನು ಚಿಕ್ಕೋಡಿ ತಾಲೂಕ ಕೇರೂರದಲ್ಲಿ ಬಿಟ್ಟು ಅವರಿಂದ ಬೀಳ್ಕೊಂಡು ಚನ್ನ್ಯಾನಹಟ್ಟಿ (ಚಿಕ್ಕೋಡಿ)ಯ ತಾದ್ನಳ್ಳಿ ಗುಡ್ಡಕ್ಕೆ ಬಂದು ತನ್ನ ಕಿಲ್ಲಾರ ಹಿಂಡುಗಳನ್ನು ಮೇಯಿಸುತ್ತಿದ್ದನು.

ತಾದ್ನಳ್ಳಿ ಗುಡ್ಡದ ಘೋರ ಅರಣ್ಯದಲ್ಲಿ ಜಲವ ತುಂಬಿದ ಕೆರೆಯಿತ್ತು, ಆ ಕೆರೆಯ ಕಾವಲಿಗೆಂದು ಅದೇ ಊರಿನ ಭಾಗಮ್ಮ ಎಂಬ ಹೆಣ್ಣು ಮಗಳನ್ನು ನೇಮಿಸಿದ್ದರು. ತನ್ನ ಆಕಳುಗಳಿಗೆ ನೀರು ಕುಡಿಸಲೆಂದು ಕೇಳಿದರೆ ಅವಳು ನೀರನ್ನು ಕೊಡಲಿಲ್ಲ. ಸಿಟ್ಟಿಗೆ ಬಂದ ಅರಣ್ಯಸಿದ್ಧನು ತನ್ನ ಕಿಲ್ಲಾರಗಳಿಗೆ ಕೆರೆಯನ್ನು ಒಡೆಯಲು ಆಜ್ಞೆ ಮಾಡಿದನು. ಆಗ ಆ ಆಕಳುಗಳು ತಮ್ಮ ಕಾಲಿನಿಂದ ಕೆರೆಯ ಒಡ್ಡನ್ನು ಕೆದರಿ ಒಡೆದವು. ಇದರಿಂದ ನೀರು ಹರಿಯತೊಡಗಿತ್ತು. ಆ ಹರಿಯುವ ನೀರನ್ನು ಕುಡಿದು ಕಿಲ್ಲಾರಗಳೆಲ್ಲ ಶಾಂತವಾದವು ನಂತರ ಭಾಗಮ್ಮ ತನ್ನ ತಪ್ಪು ಒಪ್ಪಿಕೊಂಡು ಮನ್ನಿಸಬೇಕೆಂದು ಅರಣ್ಯಸಿದ್ಧನ ಪಾದಿಗೆರಗಿದಳು. ಸಿದ್ಧ ಅವಳನ್ನು ಮನ್ನಿಸಿ ಆಶೀರ್ವದಿಸಿದನು.

ತಾರ್ನಳ್ಳಿಗುಡ್ಡದಿಂದ ಕಿಲ್ಲಾರಗಳ ಸಮೇತ ಗೋಕಾಕ ತಾಲೂಕ ಜೋಕಾನಟ್ಟಿ ಗ್ರಾಮಕ್ಕೆ ಬಂದನು. ಅನೇಕ ಭಕ್ತರನ್ನು ಕಲೆಹಾಕಿ ತನ್ನ ಸಿದ್ಧಾಟಿಕೆಯ ಮಹಿಮೆಯಿಂದ ಶಂಕರಲಿಂಗವನ್ನು ಸ್ಥಾಪನೆ ಮಾಡಿದನು. ಅದು ಇಂದಿಗೂ ಶ್ರೀ ಅರಣ್ಯಸಿದ್ಧೇಶ್ವರ ದೇವಾಲಯವೆಂದು ಪ್ರಸಿದ್ಧಿಪಡೆದಿದೆ. ಮುಂದೆ ದಂಡಾಪೂರ ಗ್ರಾಮಕ್ಕೆ ಬಂದು ಅನೇಕ ದಿನಗಳವರೆಗೆ ವ್ಯಾಳೆಗಳೆದು. ಬಡವ ಪರಪ್ಪನಿಗೆ ಶ್ರೀಮಂತಿಕೆಯ ಭಾಗ್ಯ ಕರುಣಿಸಿದನು. ಬಂಜೆಯರಿಗೆ ಮಕ್ಕಳ ಫಲಗಳನ್ನು ನೀಡಿದನು.

ಕಬ್ಬೂರ ಗ್ರಾಮಕ್ಕೆ ಬಂದು ಅಲ್ಲಿಯ ಬತ್ತಿದ ಕೆರೆಗೆ ನೀರು ತುಂಬಿಸಿದನು. ಮುಂದೆ ಬಾಗೇವಾಡಿ, ಮುನ್ನೋಳಿ, ಕರೋಶಿ ಪಟ್ಟಣಗಳಿಗೆ ಬಂದು ಅನೇಕ ಪವಾಡಗಳನ್ನು ಮಾಡಿದನು. ಜಮಖಂಡಿ ತೇರದಾಳ-ನಾವಲಗಿ ಗ್ರಾಮಗಳಿಗೆ ಬಂದು ಅಲ್ಲಿಂದ ರಾಯಬಾಗ ತಾಲೂಕಿನ ಅಲಖನೂರ ಗ್ರಾಮದ ಬೀರಪ್ಪನ ಮಡ್ಡಿಯ ಮೇಲೆ ಠಿಕಾಣಿ ಹೂಡಿದನು.



ಅದೊಂದು ದಿನ ಅಲಖನೂರ ಗ್ರಾಮದ ಕೊತ್ತಲ ಕೇರಿ ಎಂಬ ಕೆರೆಯಲ್ಲಿ ತನ್ನ ಕಿಲ್ಲಾರಗಳಿಗೆ ನೀರು ಕುಡಿಸಲೆಂದು ಹೋದನು. ಆಗ ಆ ಗ್ರಾಮದ ಅಧಿಪತಿ ಕರೆಸಿದ್ಧ ನೀರನ್ನು ಕೊಡಲಿಲ್ಲ. ಅವರೀರ್ವರ ಮಧ್ಯೆ ಘನಘೋರ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಕರೇಸಿದ್ಧ ಸರ್ಪಗಳನ್ನು ಇವನ ಮೇಲೆ ಬಿಟ್ಟನು. ಆ ಸರ್ಪಗಳನ್ನು ಹೂವಿನ ಸರ ಮಾಡಿ ಕೊರಳಿಗೆ ಹಾಕಿಕೊಂಡನು. ನಂತರ ಚೇಳಗಳನ್ನು ಬಿಟ್ಟಾಗ ಅವುಗಳನ್ನು ಕೈಬೆರಳುಗಳಿಗೆ ಉಂಗುರವನ್ನಾಗಿ ಮಾಡಿಕೊಂಡನು. ಏಡಿಗಳನ್ನು ಯುದ್ಧಕೆಂದು ಬಿಟ್ಟನು. ಆ ಏಡಿಗಳನ್ನು ಕಾಲಿಗೆ ಕಡಗಗಳನ್ನಾಗಿ ಮಾಡಿಕೊಂಡನು. ಮುಂದೆ ಕಾಳಿಂಗಸರ್ಪವನ್ನು ಈತನ ಮೇಲೆ ಬಿಟ್ಟಾಗ ಅದನ್ನು ತನ್ನ ಸೇವಕನನ್ನಾಗಿ ಮಾಡಿಕೊಂಡನು. ನಂತರ ಕರೇಸಿದ್ಧನ ಕಡೆಯಿಂದ ಅನೇಕ ರಾಕ್ಷಸರು ಯುದ್ಧಕ್ಕೆ ಬಂದಾಗ ಆ ಎಲ್ಲ ರಾಕ್ಷಸರನ್ನು ತನ್ನ ಬಳಿ ಇರುವ ಕನ್ನೆರವ್ವ ಎಂಬ ರಾಕ್ಷಸಿಯಿಂದ ಹೊಡೆದುರುಳಿಸಿದನು.

ಕನ್ನೆರವ್ವ ರಾಕ್ಷಸಿಯನ್ನು ಯಲ್ಪಾರಟ್ಟಿ–ಕಮಲಪೂರದ ಸೀಮೆಯಲ್ಲಿನ ಬಾವಿಯೊಂದರಲ್ಲಿ ತಂದಿಟ್ಟು ಅದಕ್ಕೆ ವರ್ಷಕ್ಕೆ ಒಂದು ಸಲ ನಾನು ನಿನಗೆ ಬೆಟ್ಟಿಯಾಗುವೆ ಎಂದು ಹೇಳಿ ಮತ್ತೆ ಕಿಲ್ಲಾರಗಳ ನೀರಿಗಾಗಿ ಕೊತ್ತಲಕೆರೆಗೆ ಬಂದನು. ಅಲ್ಲಿ ಅಲಖನೂರ ಕರೇಸಿದ್ಧ ಅಲಖನೂರ ಬೇಡರನ್ನು ಇವನ ವಿರುದ್ಧ ಹೋರಾಟಕ್ಕೆ ಕಳಿಸಿ ಶ್ರೀ ಅರಣ್ಯಸಿದ್ಧೇಶ್ವರನನ್ನು ಕೊಲೆ ಮಾಡಿಸಿದನು.

ಶ್ರೀ ಅರಣ್ಯಸಿದ್ಧೇಶ್ವರನ ಹತ್ಯೆಯಾದ ದಿನ ಹಾಲನ್ನು ತೆಗೆದುಕೊಂಡು ಹೋಗುವ ಗೂಳಿಯು ತಾಯಿ ಜನ್ನವ್ವಳ ಹತ್ತಿರ ಕೇರೂರಕ್ಕೆ ಹೋಗುತ್ತದೆ. ಅಂದು ಆ ತಾಯಿ ಹಾಲಿನ ಕೊಡವನ್ನು ಕೆಳಗಿಳಿಸಿ ನೋಡುತ್ತಾಳೆ. ಕೊಡದಲ್ಲಿಯ ಹಾಲು ರಕ್ತವಾಗಿತ್ತು. ಮನೆಯಂಗಳದಲ್ಲಿಯ ಧರ್ಮರಾಯನ ಕಾಮಧೇನು (ಆಕಳು) ಕಲ್ಲಾಗಿತ್ತು. ಇದನ್ನು ನೋಡಿದ ತಾಯಿ ನನ್ನ ಮಗ ಅರಣ್ಯಸಿದ್ಧನಿಗೆ ಏನೋ ಅವಗಡ ಸಂಭವಿಸಿದೆ ಎಂದು ತಿಳಿದು ತನ್ನ ಹಿರಿಯ ಮಗ ಮಲಕಾರಿಸಿದ್ಧನನ್ನು ಕರೆದುಕೊಂಡು ಅರಣ್ಯಸಿದ್ಧನ ಸಂಗಮಕ್ಕೆ ಬರಲು ಅಣಿಯಾದಳು. ಆದರೆ ಅಂದು ರಾತ್ರಿಯಾಗಿದ್ದ ಕಾರಣ ಇವರ ಜೊತೆಯಲ್ಲಿ ಬರಲು ಗ್ರಾಮಸ್ಥರು ಯಾರು ಒಪ್ಪಲಿಲ್ಲ. ಆದರೆ 'ಕಣ್ಣರಿಯದಿದ್ದರೂ ಕರುಳರಿಯದೇ' ಎಂಬಂತೆ ಆ ಗ್ರಾಮದ ಇಬ್ಬರು ಹೊಲೆಯರು, ದಿವಟಿಗೆ ಬೆಳಕನ್ನು ಹಿಡಿದುಕೊಂಡು ಇವರ ಜೊತೆ ಬರಲು ಸನ್ನದ್ಧರಾದರು.

ದಾರಿಯುದ್ಧಕ್ಕೂ ತನ್ನ ಕರುಳಕುಡಿ ಸಿದ್ಧನನ್ನು ಹುಡುಕುತ್ತಾ ಎಲ್ಲಿಯಾದರೂ ಹುಲ್ಲಗಿರಕ್ ಎಂದೊಡೆ ಮಗ ಸಿದ್ಧಾ! ಎಂದು ಯಾರಾದರೂ ಮಾತನಾಡಿದರೆ ಕಂದಾ ಎಲ್ಲಿರುವಿ ಎಂದು, ಹಂಬಲಿಸುತ್ತಾ ಮೊರಬ ಮಾರ್ಗವಾಗಿ ಬರುತ್ತಿರಲು ಬೆಳಕನ್ನು ನೀಡುವ ದೀವಟಿಗೆ ನಂದಿಹೋಯಿತು. ತಾಯಿ ಕರುಳಿಗೇನೋ ತಳಮಳ; ನನ್ನ ಮಗಸಿದ್ಧ ನಂದಿ ಹೋದನೆ ? ನಮಗೆ ಬೆಳಕನ್ನು ನೀಡುವವರು ಯಾರು ? ಎಂದು ಪರಿಪರಿಯಾಗಿ ಯೋಚಿಸುತ್ತಾ ಮೊರಬದ ಹಳ್ಳದ ನೀರನ್ನು ದೀವಟಿಗೆಗೆ ಹಾಕಿ ದೀಪಹೊತ್ತಿಸಿದಳು.

ರಾಯಬಾಗ ತಾಲೂಕಿನ ಅಲಖನೂರ ಗ್ರಾಮದ ಬೀರಪ್ಪನ ಮಡ್ಡಿಯ ಮೇಲೆ ಬಂದು ಅರಣ್ಯಸಿದ್ಧ ಎಲ್ಲಿರುವೆ! ಎಂದು ಕೂಗಿದಳು. ಆಗ ಅಲ್ಲಿಂದ ಉತ್ತರ ದಿಕ್ಕಿಗೆ ಮಗುವಿನ ಆರ್ತ ಧ್ವನಿ ಕೇಳಿ ಬರುತ್ತಿತ್ತು. ಆ ಧ್ವನಿಯನ್ನನುಸರಿಸಿ ಅಲಖನೂರ ಗ್ರಾಮದ ಕೊತ್ತಲಕೆರೆ ಕಂತಾರದಲ್ಲಿ ಬಂದು ಅಣ್ಣ ಮಲಕಾರಿಸಿದ್ಧ ತಮ್ಮಾ ಎಲ್ಲಿರುವಿ ಎಂದು ಕೂಗಿದನು. ಆಗ ಅಲ್ಲಿಯೇ ತಮ್ಮನ ಧ್ವನಿಯನ್ನು ಕೇಳಿ ಮಲಕಾರಿಸಿದ್ಧ ಹುಡುಕಹತ್ತಿದನು. ಇಂದಿಗೂ ಅದೇ ಸ್ಥಳದಲ್ಲಿ ಶ್ರೀ ಮಲಕಾರಿಸಿದ್ಧನ ದೇವಾಲಯವು ಭವ್ಯವಾಗಿ ಬೆಳೆದು ನಿಂತಿದೆ.

ತಾಯಿ ಜನ್ನವ್ವ ಮುಂದುವರೆದು ಮಗನನ್ನು ಹುಡುಕುತ್ತಾ ಯಲ್ಪಾರಟ್ಟಿ ಗ್ರಾಮದ ದಟ್ಟ ಅರಣ್ಯದಲ್ಲಿ ಬಂದು ಮಗುಸಿದ್ಧಣ್ಣ ಈಗಲಾದರೂ ಈ ತಾಯಿಯ ಮಡಿಲನ್ನು ತುಂಬುವೆಯಾ ? ಎಂದಾಗ ಅಮ್ಮಾ ನಾನು ಇಲ್ಲಿಯೇ ನಿನ್ನ ಮುಂದೆಯೇ ಇದ್ದೇನೆ ಎಂದು ಹೇಳಿ ತನ್ನ ರಕ್ತಸಿಕ್ತ

ಮುಖವನ್ನು ತಾಯಿಗೆ ತೋರಿಸಲಾಗದೆ ಅಲ್ಲಯೇ ಅದೃಶ್ಯವಾದನು. ಮಗನ ಹರಣವನ್ನು ಹುಡುಕಲು ತಾಯಿ ಜನ್ನಮ್ಮ ತಾನು ನಿಂತ ಸ್ಥಳದಲ್ಲಿಯೇ ತನ್ನ ದೇಹವನ್ನು ಬಿಟ್ಟು ಮಗನಿಗಾಗಿ ಹಿಂಬಾಲಿಸಿದಳು.

**ಜಾತ್ರೆ ಉತ್ಸವ :**

ರಾಯಬಾಗ ತಾಲ್ಲೂಕಿನ ಕಮಲಪುರ (ಖೇಮಲಾಪೂರ) ಗ್ರಾಮದ ದಕ್ಷಿಣ ದಿಕ್ಕಿನ ಕೃಷ್ಣಾನದಿತೀರದ ದಂಡೆಯ ಮೇಲಿನ ಯಲ್ಲಾಲಿಂಗನ ಊರು ಯಲ್ಲಾಪೂರ ಇಂದು ಯಲ್ಪಾರಟ್ಟಿಯಾಗಿದೆ. ಕಾರಣ ಶ್ರೀ ಅರಣ್ಯಸಿದ್ಧೇಶ್ವರನ ಜಾತ್ರೆಯು ಪ್ರತಿವರ್ಷ ಶಿವರಾತ್ರಿ ಅಮವಾಸ್ಯೆಯಾದ ಐದನೇಯದಿನ ದೇವರ ಜಾತ್ರೆಯ ಕಾರ್ಯಕ್ರಮ ನಡೆಯುತ್ತದೆ. ಹಾಗೂ ಹತ್ತನೆಯ ದಿನ ನೈವೇದ್ಯ ಕಾರ್ಯಕ್ರಮ ನಡೆಯುತ್ತದೆ. ಹಾಗೂ ಹನ್ನೊಂದನೆ ದಿನ ಶ್ರೀ ಅರಣ್ಯಸಿದ್ಧನ ಸೇವಕಿಯಾದ ಕನ್ನೇರವ್ವ ರಾಕ್ಷಸಿಯ ನಿವಾಳಿಕೆಯಾಗುತ್ತದೆ. ಮೊದಲಿಗೆ ಇದು ಕೇವಲ ಒಂದು ದಿನದ ಜಾತ್ರೆಯಾಗಿ ನಡೆಯುತ್ತಿತ್ತು.

## ೨.೨.೮ ಮುಗಳಖೋಡದ ಶ್ರೀ ಯಲ್ಲಾಲಿಂಗ ಅಜ್ಜನವರು :

ಯಲ್ಲಾಲಿಂಗರು ಇತ್ತೀಚಿನ ಹಾಲುಮತದ ದೇವರು. ಇವರು ಮೂಲತ; ಮಿರಗಿ ಗ್ರಾಮದವರು. ಇದು ವಿಜಾಪುರ ಜಿಲ್ಲೆ ಸಿಂದಗಿ ತಾಲೂಕಿನ ಒಂದು ಪುಟ್ಟಗ್ರಾಮ. ಅಲ್ಲಿಯ ಕಾಶಿಬಾಯಿ-ಶಿವಪ್ಪ ದಂಪತಿಗಳ ಸುಪುತ್ರ ಯಲ್ಲಾಲಿಂಗರು.

೧೮೮೬ ಚೈತ್ರಮಾಸ ಕ್ಷಯನಾಮ ಸಂವತ್ಸರ ಶುಕ್ಲ ಪಕ್ಷ ಸೋಮವಾರ ಬೆಳಗಿನ ವೇಳೆಗೆ ಮಂಗಲಮಯ ಪುಣ್ಯಗಳಿಗೆಯಲ್ಲಿ ಜಗವ ಬೆಳಗಲು ಜ್ಞಾನಭಾಸ್ಕರನ ಜಗದೀಶನ ದಿವ್ಯ ತೇಜವೇ ಶಿಶುವಿನ ರೂಪದಲ್ಲಿ ಶೀಲ, ಸದ್ಗುಣ, ಪಾವನ ಚರಿತೆಯಾದ ಕಾಶೀಬಾಯಿಯ ಗರ್ಭದಿಂದ ಧರೆಗಿಳಿದು ಬಂದಿತು ತೇಜೋಮಯ ಮೂರುತಿ. ಮಗುವಿಗೆ ಯಲ್ಲಪ್ಪವೆಂದು ನಾಮಕರಣ ಮಾಡಿದರು.

ಯಲ್ಲಪ್ಪನು ಬೆಳೆದು ಬಾಲಕನ ವಯಸ್ಸಿಗೆ ಬಂದಾಗ ತಂದೆಯ ವೃತ್ತಿಯಾದ ಕುರಿ ಕಾಯುವ ಕಾಯಕವನ್ನು ಮಾಡುತ್ತ ತಂದೆಗೆ ಸಹಾಯ ಮಾಡತೊಡಗಿದನು. ಆ ಹುಡುಗನು ದಿನಾಲು ಕುರಿಗಳ ಹಾಲನ್ನು ಸೇವಿಸುತ್ತ ಆರೋಗ್ಯವಂತನಾಗಿ ದಷ್ಟಪುಷ್ಟವಾಗಿ ಬೆಳೆದು ಯೌವ್ವನಕ್ಕೆ ಬಂದನು. ಸುಂದರವಾದ ಜಟ್ಟಿಯಂತೆ ಬೆಳೆದು ನಿಂತ ಯಲ್ಲಪ್ಪನಿಗೆ ಎಲ್ಲರೂ "ಎಪ್ಪಾ! ನೀನು ಬೆಳೆದು ಮದುವೆಯ ವಯಸ್ಸಿಗೆ ಬಂದಿರುತ್ತಿ, ಸುಂದರವಾದ ಹುಡುಗಿಯನ್ನು ಆಯ್ಕೆ ಮಾಡಿ ಲಗ್ನವಾಗು" ಅಂದರು. ಅವರ ಮಾತನ್ನು

ಯಲ್ಲಾಲಿಂಗನು ಮನಸ್ಸಿನ ಮೇಲೆ ತೆಗೆದುಕೊಳ್ಳಲಿಲ್ಲ. ಯಾಕೆಂದರೆ ಅವನಿಗೆ ಲಗ್ನ ಮಾಡಿಕೊಳ್ಳಬೇಕು, ಸಂಸಾರವನ್ನು ಮಾಡಿ ಮಕ್ಕಳನ್ನು ಪಡೆಯಬೇಕೇಂಬ ಹಂಬಲ ಇರಲಿಲ್ಲ.

ತಾಯಿಯು ಮಗನನ್ನು ಕರೆದು "ಮಗನೆ! ನೀನು ಮದುವೆಯಾಗಿ ಪ್ರಪಂಚ ಮಾಡಿ ನಿನ್ನ ತಂದೆ ಹಾಗೂ ನನ್ನ ಕೈಯಲ್ಲಿ ನಿನ್ನ ಮಗುವನ್ನು ತೆಗೆದುಕೊಂಡು ಆಡಿಸಬೇಕು, ಪ್ರೇಮದಿಂದ ಮುದ್ದುಕೊಡಬೇಕೆಂಬ ನಮ್ಮ ಹಂಬಲವನ್ನು ಮಣ್ಣುಗೂಡಿಸಬೇಡ, ನೀನು ಕುರಿ ಕಾಯುವ ಕುರುಬನು ಹಾಗೂ ಕರ್ನಾಟಕ, ಮಹಾರಾಷ್ಟ್ರದಲ್ಲಿ ಜಯಭೇರಿ ಹೊಡೆದು ಜಗಜಟ್ಟಿಯು ಮತ್ತು ರಾತ್ರಿಯ ವೇಳೆಯಲ್ಲಿ ಶರಣರ ಹಾಗೆ ದೇವರ ಮೇಲೆ ವಿಶ್ವಾಸದಿಂದ ಭಕ್ತಿಯಿಟ್ಟು ದೇವರ ಧ್ಯಾನದಲ್ಲಿ ಮಗ್ನನಾಗುತ್ತಿ ಇಂತಹದರಲ್ಲಿ ನಾವು ನಿನಗೆ ಹೇಳುವಷ್ಟು ಸಮರ್ಥರಲ್ಲ. ಆದರೆ ನೀನು ಪ್ರಪಂಚ ಮಾಡಿ ಮುಕ್ತಿಯನ್ನು ಪಡೆ ಎಷ್ಟೋ ಜನರು ಪ್ರಪಂಚ ಮಾಡಿ ಪಾರಮಾರ್ಥವನ್ನು ಸಾಧಿಸಿದ್ದಾರೆ. ಅವರಂತೆ ನೀನು ಮಾಡು" ಎಂದು ಅವನ ತಾಯಿಯು ಬೋಧನೆ ಮಾಡಿದಳು. ಅದರಂತೆ ಯಲ್ಲಪ್ಪ ಹೆನ್ನವ್ವನನ್ನೂ ಮದುವೆಯಾದನು.

ಗಂಡ ಹೆಂಡತಿಯರಾಗಿ ಕೆಲವು ದಿವಸ ಹೋಗುವದರೊಳಗೆ ಹೊನ್ನವ್ವಳಿಗೆ ಗರ್ಭದ ಚಿಹ್ನೆಗಳು ಕಾಣ ತೊಡಗಿದವು. ಇವನ ತಾಯಿಗೆ ಆನಂದವಾಗಿ ಸೊಸೆಯ ಆರೈಕೆಯನ್ನು ಒಳ್ಳೆಯ ಉತ್ತಮ ರೀತಿಯಿಂದ ಮಾಡತೊಡಗಿದಳು. ಹೀಗೆ ನಡೆದ ಸಮಯದಲ್ಲಿ ನವಮಾಸ ತುಂಬಿ ಹೆರಿಗೆ ಆಗುವ ವೇಳೆಗೆ ಗರ್ಭದಲ್ಲಿ ಮಗುವಿನೊಂದಿಗೆ ಹೊನ್ನವ್ವ ತೀರಿಕೊಂಡಳು.

ತಾಯಿ ತಂದೆಗೆ ಆಗಲಿ, ಗ್ರಾಮದ ಜನರಿಗಾಗಲಿ ಇಷ್ಟು ದಿವಸದ ವರೆಗೆ ಎಷ್ಟು ಆನಂದವಾಗಿದ್ದಿತೋ ಅಷ್ಟು ದುಃಖ ಮಾಡತೊಡಗಿದರು. ಆದರೆ ವಿಧಿಯ ಮುಂದೆ ಯಾರ ಆಟವೂ ಸಾಗುವುದಿಲ್ಲ. ಎಲ್ಲ ಸುತ್ತಲಿನ ಗ್ರಾಮಗಳ ಜನರು ಕೂಡಿಕೊಂಡು ಶವವನ್ನು ಅಂತ್ಯಕ್ರಿಯೆಗಾಗಿ ಸ್ಮಶಾನಕ್ಕೆ ತೆಗೆದುಕೊಂಡು ಹೋದರು. ಕಟ್ಟಿಗೆಯ ಮೇಲೆ ಗರ್ಭದಲ್ಲಿದ್ದ ತಾಯಿ ಮಗುವನ್ನು ಮಲಗಿಸಿ ಬೆಂಕಿಯನ್ನು ಇಡಲಾಯಿತು. ಧಗಧಗನೆ ಉರಿಯುವ ಅಗ್ನಿಯಲ್ಲಿ ಪತ್ನಿ ಮಗುವು ದಹಿಸುವುದನ್ನು ನೋಡಿ ಯಲ್ಲಪ್ಪನು ಅದೇ ಬೂದಿಯನ್ನು ತೆಗೆದು ಮೈಯಲ್ಲಾ ಬಳಿದುಕೊಂಡು ಆರು ಗುಣಗಳನ್ನು ಅದೇ ಬೆಂಕಿಯಲ್ಲಿ ಬಿಟ್ಟಂತೆ ಮಾಡಿ 'ಜೈ ಸಿದ್ಧಲಿಂಗಾ' ಎಂದು ಅನ್ನುತ್ತ ಲಚ್ಯಾಣ ಮಠದ ಹಾದಿಯನ್ನು ಹಿಡಿದು ನಡೆದನು. ಈಗ ಅವನಿಗೆ ವೈರಾಗ್ಯ ಬಂದಿತು.

ಲಚ್ಯಾಣ ಗ್ರಾಮದಲ್ಲಿದ್ದ ಸುಪ್ರಸಿದ್ಧ ಕಮರೀಮಠಕ್ಕೆ ಬಂದು ಸಿದ್ಧಲಿಂಗ ಸ್ವಾಮಿಗಳಿಗೆ ನಮಿಸಿ ನನ್ನ ಪಾಲಿಗೆ ನೀವೇ ದೇವರು, ನೀವೇ ಗುರುಗಳು ಎಂದು ಅತೀ ವಿನಯದಿಂದ ಸೇವೆ ಮಾಡುತ್ತ ನೀವೇ ನನಗೆ ಗುರೂಪದೇಶ ಕೊಡಬೇಕೆಂದು ಬೇಡಿಕೊಂಡನು. ಯಲ್ಲಪ್ಪನು ಅಲ್ಲಿಯೇ ತಪಸ್ಸು ಮಾಡುವಾಗ ಸಿದ್ಧಲಿಂಗಸ್ವಾಮಿಗಳು ಅವನನ್ನು ಪರೀಕ್ಷೆ ಮಾಡಿದರು. ಅವರು ಕೇಳುವ ಪ್ರಶ್ನೆಗಳಿಗೆ ಉತ್ತರಿಸುತ್ತಾ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತ ಮೂರು ವರ್ಷಗಳ ವರೆಗೆ ಭಕ್ತಿ ಪೂರ್ವಕವಾಗಿ ಅವರ ಸೇವೆಯನ್ನು ಮಾಡುತ್ತಾ 'ಯಲ್ಲಾಲಿಂಗ'ನಾದನು.

ಸ್ವಾಮಿಗಳು 'ಯಲ್ಲಾಲಿಂಗನೇ ನೀನು ಎರಡು ಹೊಳೆಗಳನ್ನು ದಾಟಿ ಒಂದು ಗ್ರಾಮದ ಸಮೀಪ ಸ್ಮಶಾನದಲ್ಲಿ ಮಠ ಕಟ್ಟಿ ಜನರನ್ನು ಉದ್ಧಾರ ಮಾಡುತ್ತ ಹೋಗು' ಮುಂದೆ ಆ ಮಠವು ಪ್ರಸಿದ್ಧಿಗೆ ಬರುವದು ಎಂದು ಆಶೀರ್ವದಿಸಿ ಕಳುಹಿಸಿದರು.

ಯಲ್ಲಾಲಿಂಗನು ಅವರ ಗುರುಗಳಾದ ಸಿದ್ಧರಾಮ ಸ್ವಾಮಿಗಳ ಕಡೆಯಿಂದ ಕಾವಿಯ ವಸ್ತ್ರವನ್ನು ತೊಟ್ಟು ತನ್ನಂತೆ ಕಾವಿ ತೊಟ್ಟವರಿಗೆ ಕಾಯಕವನ್ನು ಬೋಧಿಸುತ್ತ, ಪವಾಡಗಳನ್ನು ಬೀರುತ್ತ ಪವಾಡಪುರುಷನಾಗಿ ಪ್ರಸಿದ್ಧಿಗೆ ಬಂದನು.

ಯಲ್ಲಾಲಿಂಗ ಮಹಾರಾಜರಿಂದ ಭಕ್ತರಿಗೆ ಸತತ ಉಪದೇಶದ ಹಿತನುಡಿಗಳನ್ನು ಭೋದಿಸುತ್ತ ಹಿಂದೂ-ಇಸ್ಲಾಂ ಧರ್ಮದಲ್ಲಿಯಾದರೂ ಭೇದ ಭಾವ ಮಾಡದೆ, ಎಲ್ಲ ಮಾನವ ಜಾತಿ ಒಂದೇ. ನಾವೆಲ್ಲರೂ ಒಬ್ಬ ತಂದೆಯ ಮಕ್ಕಳು. ಅವನು ನಮ್ಮೆಲ್ಲರ ಮೇಲೆ ಹೇಗೆ ದಯಾಳು ಗುಣ, ಸಮ ಭಾವನೆಯನ್ನು ಇಟ್ಟಿರುವನೋ ಅವನಂತೆ ನಾವಾದರೂ ಮಾನವರ ಮೇಲೆ ಅಷ್ಟೇ ಅಲ್ಲದೆ ಸಕಲ ಜೀವಾತ್ಮರಿಗೆ ಲೇಸನ್ನೆ ಬಯಸುತ್ತಾ, ಹೋದದ್ದಾದರೆ ಆ ಪರಮಾತ್ಮನು ನಮಗೆ ಒಳ್ಳೆಯದನ್ನು ಮಾಡುತ್ತಾನೆ. ಶರಣರು "ದಯವೇ ಧರ್ಮದ ಮೂಲವಯ್ಯಾ", "ಅಹಿಂಸಾ ಪರಮೋ ಧರ್ಮ" ಅನ್ನುವಂತೆ ನಡೆಯಿರಿ ಎಂದಿದ್ದಾರೆ.

ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲೂಕಿನಲ್ಲಿರುವ ಜಂಬಗಿ ಎಂಬ ಊರಿನವರಾದ ಶಿವಭಕ್ತ ಶರಣರಾದ ಶ್ರೀ ಚನ್ನವೀರಯ್ಯ, ತಾಯಿ ಶರಣಮ್ಮ ಇವರ ಗರ್ಭದಲ್ಲಿ ಜನಿಸಿದವರಾದ ಕಾಯಕಯೋಗಿ ಆಧ್ಯಾತ್ಮ ಜೀವಿ ಎನಿಸಿದ ಶರಣ ಶ್ರೀ ಸಿದ್ಧರಾಮೇಶ್ವರ ಅನ್ನುವವರನ್ನು ಆಯ್ಕೆ ಮಾಡಿಕೊಂಡರು. ಇಷ್ಟೆಲ್ಲ ನಡೆಯಬೇಕಾದರೆ ಯಲ್ಲಾಲಿಂಗ ಮಹಾರಾಜರಿಗೆ ಶತಾಯುಷಿ ಆಯುಷ್ಯವು ಸಮೀಪಿಸಿತು. ಆಗ ಎಲ್ಲ ಸುತ್ತಲಿನ ಗ್ರಾಮದ ಜನರಿಗೆ ನನ್ನ ಮುಕ್ತಿಯ ದಿನಗಳು ಸಮೀಪವಾಗಿವೆ ಎಂದು ಹೇಳಿದರು.

ಇದನ್ನು ಕೇಳಿದ ಎಲ್ಲ ಭಕ್ತ ವೃಂದವು ದುಃಖ ಮಾಡತೊಡಗಿತು. ಅವರಿಗೆ ಯಲ್ಲಾಲಿಂಗ ದೇವರು ಈ ರೀತಿಯಾಗಿ ಹೇಳುತ್ತಾರೆ. "ಭಕ್ತರೇ, ಪ್ರತಿಯೊಂದು ಜೀವಿಯು ಹುಟ್ಟುವಾಗಲೇ ಸಾವನ್ನು ಬೆನ್ನಿಗೆ ಕಟ್ಟಿಕೊಂಡು ಬಂದಿರುತ್ತದೆ. ಹುಟ್ಟಿದ್ದು ಒಮ್ಮೆ ಸಾಯಲೇಬೇಕು. ಅದಕ್ಕೆ ದುಃಖಿಸಬಾರದು. ಜೀವವು ಈ ಶರೀರವನ್ನು ಬಿಟ್ಟು ಮತ್ತೊಂದು ಶರೀರ ಧಾರಣ ಮಾಡುವ ಸಲುವಾಗಿ ಹೋಗುತ್ತದೆ. ಆದರೆ ಪಾಪ ಪುಣ್ಯದ ಲೆಕ್ಕಪತ್ರ ಆದ ಮೇಲೆ ಅದಕ್ಕೆ ಶರೀರವು ಸಿಗುವದು" ಎಂದು ಹೇಳುತ್ತಾ ಹಿಂದಿನ ಎಲ್ಲ ಜನ್ಮದ ಪಾಪ ಪುಣ್ಯಗಳನ್ನು ಲೆಕ್ಕ ಮಾಡಿದರೆ ಪಾಪ ಇಲ್ಲದಾಗಿ ಇವರ ಹಿತದ ಮಾತನ್ನು ಅಲ್ಲಗಳೆದ ಅಕ್ಕಲಕೋಟೆಯ ತಹಶೀಲ್ದಾರರಾದ ಕಾಶೀಮ ಸಾಹೇಬರು ಸ್ವಾಮಿಗಳಿಗೆ ವಿರುದ್ಧ ಹೋಗಿ, ಅಲ್ಲಸಲ್ಲದ ಮಾತುಗಳನ್ನು ಮಾತನಾಡಿ ಮತ್ತೆ ಇವರಿಗೆ ಶರಣು ಬಂದ, ಕ್ಷಮೆ ಬೇಡಿ ಯಲ್ಲಾಲಿಂಗರಿಂದಲೇ ಗುರುವಿನ ಉಪದೇಶವನ್ನು ತೆಗೆದುಕೊಂಡು "ಕಾಶೀನಾಥ ಮಹಾರಾಜ"

ರೆಂದು ಬೆಂಕಿಯ ಬಣ್ಣದ ವಸ್ತ್ರವನ್ನು ತೊಟ್ಟು ಗುರುಗಳಿಗೆ ಮೀರಿದ ಶಿಷ್ಯನೆನಿಸಿ ಉಸ್ಮಾನಾಬಾದ ಜಿಲ್ಲೆಯ ರಾಮವಾಡಿಯಲ್ಲಿ ದಾಸೋಹ ಮೂರ್ತಿ ಎನಿಸಿದರು. ಯಲ್ಲಾಲಿಂಗ ಸ್ವಾಮಿಗಳು ಸಂಚರಿಸುತ್ತ ಸತ್ಯ ಶುದ್ಧ ಕಾಯಕದ ಮಹತ್ವವನ್ನು ತಿಳಿಸಿ ಹೇಳುತ್ತ "ಕೈ ಕೆಸರಾದರೆ ಬಾಯಿ ಮೊಸರು", "ದುಡಿತವೇ ದುಡ್ಡಿನ ತಾಯಿ", "ಆಳಾಗಿ ದುಡಿ ಅರಸನಾಗಿ ಉಣ್ಣು" ಅನ್ನುವ ಮಾತಿನಂತೆ ನಡೆಯುವ ಸರಳ ಮಾರ್ಗವನ್ನು ಭಕ್ತರಿಗೆ ತೋರಿಸುತ್ತ ನಡೆದರು. ಇವರ ಮಾತು ಮಮತೆಯಿಂದ ಹೇಳಿಕೆಗಳು ಶಿಷ್ಯರ ಮನಸ್ಸಿನ ಮೇಲೆ ಪ್ರಭಾವ ಬೀರಿ ಯಲ್ಲಾಲಿಂಗ ಮಹಾರಾಜರ ಹೇಳಿಕೆಯಂತೆ ನಡೆದರು. ಯಲ್ಲಾಲಿಂಗ ಮಹಾರಾಜರು ನುಡಿದಂತೆ ನಡೆದು ನಡೆದಂತೆ ನುಡಿಯುವಂತೆ ಹನ್ನೆರಡು ವರ್ಷ ಕೃಷಿ ಕೆಲಸ, ಮಠದ ಸೇವೆಯ ಕಾಯಕವನ್ನು ಸತತ ಮಾಡುತ್ತ ನಡೆದವರಾದರು.

ಯಲ್ಲಾಲಿಂಗ ಮಹಾರಾಜರು ಸಂಚಾರ ಮಾಡುವಾಗ ಎತ್ತಿನ ಬಂಡಿಯಲ್ಲಿ ಕುಳಿತು ಜನರಿಗೆ ಬೋಧನೆ ಮಾಡುತ್ತ ಹೊರಟರು. ಇಂಥ ಸಮಯದಲ್ಲಿ ಅವರ ನುಡಿಗಳು ವೇದ ವಾಕ್ಯವಾಗಿ, ಶಿವ ಮಂತ್ರದಂತೆ ಅವರಾದರೂ ಶಿವ ರೂಪವಾಗಿ ಜನರಿಗೆ ಗೋಚರಿಸಿದಾಗ ಕೆಲವು, ಭಕ್ತರು ಮೋಟಾರ, (ಕಾರು) ಗಾಡಿಗಳನ್ನು ಕೊಟ್ಟರು ಎಂದು ೧೦ ವರ್ಷದ ಹಿಂದೆ ನಮ್ಮ ತಾಯಿ–ಸಾವಿತ್ರಿಯವರು ನನಗೆ ಹೇಳುತ್ತಿದ್ದರು. ಅದು ಅಲ್ಲದೇ ಕುದುರೆ ಗಾಡಿ ತೆಗೆದುಕೊಂಡು ನಮ್ಮ ತೋಟಕ್ಕೆ ಬಂದು ಮನೆ ಮನೆಗೆ ಹೋಗಿ ರೊಟ್ಟಿಯನ್ನು ತೆಗೆದುಕೊಂಡು ಹೋಗಿ ಮಠದಲ್ಲಿ ದಾಸೋಹವನ್ನು ಪ್ರಾರಂಬಿಸುತ್ತಿದ್ದರು ಎಂದು ಹೇಳುತ್ತಿದ್ದರು. ಭಕ್ತರು ಕೊಟ್ಟ ಕಾರಿನಲ್ಲಿ ಕುಳಿತು ಉತ್ತರ ಭಾಗದಿಂದ ದಕ್ಷಿಣ ಭಾಗದ ಕನ್ಯಾಕುಮಾರಿಯ ವರೆಗೆ ಸಂಚಾರ ಮಾಡುತ್ತಿದ್ದರು. ಮುಗಳಖೋಡದ ಮಠದಲ್ಲಿ ನಿತ್ಯ ದಾಸೋಹದ ಕಾರ್ಯಕ್ರಮವನ್ನು ಸತತ ಇನ್ನು ವರೆಗೆಯಾದರೂ ನಡೆಸಿಕೊಂಡು ಹೊರಟಿದ್ದಾರೆ.

# : ಟಿಪ್ಪಣಿಗಳು :

೧) ಗ್ರಾಮದೇವತೆಗಳು : ಲೇಖಕ : ಡಾ. ಸಿದ್ಧಲಿಂಗಯ್ಯ : ಪುಟ–೧೬ : ಪ್ರ.ವರ್ಷ : ೧೯೯೭

೨) ಹಾಲಕೆನೆ : ಲೇಖನ : ಡಾ. ಎಮ್. ಎಮ್. ಪಡಶೆಟ್ಟಿ : ಪುಟ–೮೯ ಪ್ರ.ವರ್ಷ : ೨೦೦೨

೩) ಅದೇ : ಪುಟ–೯೧

೪) ಬ.ವ.ಸಂ. : ಪುಟ–೧೩೮

೫) ಕುರುಬರ ಹೆಜ್ಜೆಗಳು ಒಂದು ಅಧ್ಯಯನ : ಲೇಖಕ : ಚಂದ್ರಕಾಂತ ಬಿಜ್ಜರಗಿ :
ಪುಟ–೬೧ : ಪ್ರ.ವರ್ಷ : ೨೦೦೬

೬) ಅದೇ : ಪುಟ–೬೩

೭) ಜನಪದ ಹಾಲುಮತ ಮಹಾಕಾವ್ಯ : ಸಂ : ಡಾ. ವೀರಣ್ಣ ದಂಡೆ :
ಪುಟ–೨೮೯ : ಪ್ರ.ವರ್ಷ : ೨೦೦೦

೮) ಹಾಲಕೆನೆ : ಲೇಖನ : ಡಾ. ವ್ಹಿ. ಎಸ್. ಮಾಳಿ : ಪುಟ–೧೦೪

೯) ಅದೇ : ಪುಟ–೧೦೫

೧೦) ಜನಪದ ಹಾಲುಮತ ಮಹಾಕಾವ್ಯ : ಸಂ : ಡಾ. ವೀರಣ್ಣ ದಂಡೆ :
ಪುಟ–೨೮೯ ಪ್ರ.ವರ್ಷ : ೨೦೦೦

೧೧) ಈ ಹಾಡು ಹಾಡಿದವರು : ಕರೆಪ್ಪ ಶಿವರಾಯ ಪೂಜೇರಿ

೧೨) ಹಾಲಕೆನೆ : ಲೇಖನ : ರೇವಣಸಿದ್ಧೇಶ್ವರ : ಸುಧಾಕರ : ಪುಟ–೭೧

೧೩) ಮಾಲಿಂಗರಾಯನ ಕಾವ್ಯ : ಸಂ : ಗಂಗಾಧರ ದೈವಜ್ಞ : ಪುಟ–೧೯ : ಪ್ರ.ವರ್ಷ : ೧೯೯೯

ಅಧ್ಯಾಯ – ೩

# ಹಾಲುಮತ ದೈವಗಳ ಹುಟ್ಟು ಮತ್ತು ಬೆಳವಣಿಗೆ

ಹಾಲು ಯಾತಕ್ಕೆ ಅನ್ನಬೇಕು ಎಂಬ ವಿಚಾರವನ್ನು ನಾವು ಮೊದಲು ಮಾಡಿಕೊಳ್ಳಬೇಕು. ಈ ಕಳ್ಳಿಯ ಹಾಲು, ಎಕ್ಕೆಯ ಹಾಲು, ಅತ್ತಿಯ ಹಾಲು, ಸುಣ್ಣದ ತಿಳಿನೀರು ಇವು ಶುಭ್ರವಾಗಿ ಕಾಣಿಸಿದರೂ ಹಾಲು ಅಲ್ಲ. ಹಾಲು ಪೌಷ್ಟಿಕ ಆಹಾರ. ಹಿಂದಿನವರು ಚರಿಗೆಗಟ್ಟಲೆ ಹಾಲು ಕುಡಿದು ಶಕ್ತಿ ಸಂಪಾದಿಸುತ್ತಿದ್ದರು. ಇಂಥ ಮಾತುಗಳು ಜನಪದ ಗರತಿಯಲ್ಲಿ ಪ್ರಸಿದ್ಧವಾಗಿದ್ದವು. ಕೆಲವನ್ನಿಲ್ಲಿ ಹೇಳಬಹುದು.

**"ಹಾಲು ಇದ್ದಾಗ ಹಬ್ಬವ ಮಾಡವ್ವ**
**ನಾವು ನಾಲ್ವರು ಮನಿಯಾಗ ಇದ್ದಾಗ**
**ಮಾಡವ್ವ ಮಗನ ಮದುವೆಯ"** [೧]
**"ಹಾಲುಂಡ ತವರೀಗಿ ಏನೆಂದು ಹಾಡಲೆ**
**ಹೊಳಿ ದಂಡಿಲಿರುವ ಕರಕೀಯ– ಕುಡಿಯಂಗ**
**ಹಬ್ಬಲೆ ಅವರ ರಸಬಳ್ಳಿ"** [೨]

ಈ ತ್ರಿಪದಿ ಎಲ್ಲರ ಬಾಯಲ್ಲಿ ಗುಣುಗುಣಿಸುತ್ತಿದೆ. ತಂದೆ–ತಾಯಿಯರ ಉಪಕಾರ ಸ್ಮರಣೆಯು ಇದರಲ್ಲಿ ಕೆನೆಗಟ್ಟಿದೆ. ಕೃತಜ್ಞತಾ ಬುದ್ಧಿಯೇ ಮೈವೆತ್ತು ನಿಂತ ಗರತಿಯು ತವರಿಗಾಗಿ ಮೈಮರೆತು ಹಾಡಿದ ಈ ಹಾಡು ಈಗಲೂ ನೆನೆಯುತ್ತಾರೆ.

ಅಂದಿನ ಗರತಿಯರು ಅಕ್ಕ–ತಂಗಿ, ಅಣ್ಣ–ತಮ್ಮ, ಅತ್ತಿಗೆ–ನಾದಿನಿಯರಲ್ಲಿಯೂ ಹಾಸ್ಯಕ್ಕಾಗಿ ಬಳಸಿದ್ದು ಹೀಗೆ –

**"ಅಣ್ಣನ ಹೆಂಡತಿ ಕಣ್ಣಿಗೆ ಒಳ್ಳೆಯವಳು**
**ಸುಣ್ಣದ ನೀರು ಒಲಿಮುಂದ ಇಟಗೊಂಡು**
**ಎಮ್ಮಿ ಹಾಲೆಂದು ಬಡಿಸ್ಯಾಳು"** [೩]

ತಂಗಿಯ ಸ್ಥಾನದಲ್ಲಿರುವ ಗರತಿಯು ಅಣ್ಣನ ಹೆಂಡತಿಯ ಗುಣಾವಗುಣಗಳನ್ನು ಬಿಂಬಿಸುವ ಈ ಹಾಡು ಹಾಲಿನ ಬಣ್ಣದಂತಿರುವ (ಮಧುರತೆಯಿಲ್ಲದ) ಸುಣ್ಣದ ನೀರು ಹಾಲೆಂದೇ ಉಣಬಡಿಸುವ ಹೀನ ಬುದ್ಧಿಯವರೂ ಇದ್ದರೆಂಬುದನ್ನು ಬಣ್ಣಿಸುತ್ತದೆ. ಹೀಗೆ ಹಾಲಿನ ಬಗೆಗೆ ಪವಿತ್ರ ಭಾವನೆಗಳಿವೆ, ಹಾಲಿನಲ್ಲಿ ಪ್ರಮುಖವಾದ ಗುಣ ಲಕ್ಷಣಗಳು ಇಂತಿವೆ –

೧) ಶುಭ್ರತ್ವ

೨) ದ್ರವತ್ವ

೩) ಮಧುರತ್ವ

ಹೀಗೆ ಹಾಲಿನಲ್ಲಿ ಮೂರು ಗುಣಗಳಿವೆ. ಅದರಲ್ಲಿಯ ಒಂದು ಗುಣವನ್ನು ಕಳೆದುಕೊಂಡರೆ ಹಾಲು ಅಲ್ಲ. ಕಳ್ಳಿಯ ಹಾಲು ಶುಭ್ರವಾಗಿದ್ದರೂ ಅದು ಹಾಲು ಅಲ್ಲ. ಅದರಲ್ಲಿ ಮಧುರತ್ವವಿಲ್ಲ. ಸುಣ್ಣದ ನೀರು ಶುಭ್ರತ್ವ ದ್ರವವಿದ್ದರೂ ಅದು ಹಾಲು ಅಲ್ಲ. ಯಾಕೆಂದರೆ ಮಧುರತ್ವವಿಲ್ಲದ ಕಲ್ಲುಸಕ್ಕರೆಯು ಶುಭ್ರವಾಗಿದ್ದರೂ ಅದರಲ್ಲಿ ದ್ರವತ್ವ ಇಲ್ಲ.

ಹಾಲಿನ ಮಹತ್ವವನ್ನು ಕುರಿತು ಕನ್ನಡದ ಖ್ಯಾತ ಕವಿ ಸರ್ವಜ್ಞನು 'ಹಾಲುಮತ'ವ ಕುರಿತು ತನ್ನ ಒಂದು ವಚನದಲ್ಲಿ ಈ ರೀತಿಯಾಗಿ ಹೇಳಿದ್ದಾನೆ.

**ಹಾಲು ಹೈನವು ಲೇಸು। ಕೀಲು ಬಂಡಿಗೆ ಲೇಸು॥**
**ಶೀಲವುಳ್ಳಂಥ ಸತಿ ಲೇಸು । ಮತಗಳಲ್ಲಿ ॥**
**ಹಾಲುಮತ ಲೇಸು ಸರ್ವಜ್ಞ ॥**

ಧರ್ಮ ಇಂದು ಮೂಲಭೂತವಾದಿಗಳ ವೇದಿಕೆಯಾಗುತ್ತಿದೆ. ಪ್ರಪಂಚದ ಪ್ರಾಚೀನ ಧರ್ಮಗಳಾದ ಜೆರೋಷ್ಟ್ರಾಯ, ಜಿಂಕೋ, ಝಿಂಟೊ, ಕ್ಯಾನಪ್ಯೂಸಿಯಸ್, ತಾವೊ, ಬ್ರೂಹಿ, ಬೌದ್ಧ, ಜೈನ, ಯಹೂದಿ, ಕ್ರೈಸ್ತ, ಇಸ್ಲಾಂ, ಶಿಖ್, ನಾಥ, ಮಹಾನುಭಾವ, ಶೈವ, ವೀರಶೈವ ಮುಂತಾದ ನೂರಾರು ಧರ್ಮಗಳು ಈ ಭೂಮಿಯಲ್ಲಿ ಹುಟ್ಟಿ ಬೆಳೆದು ಜೀವಂತವಾಗಿವೆ. ಕೆಲವು ಅಳಿದು ಹೋಗಿವೆ. ಇನ್ನೂ ಕೆಲವು ಅವಸಾನದ ಹಾದಿಯಲ್ಲಿವೆ. ಮತ್ತೆ ಕೆಲವು ಉದಯದ ಹೊಸ್ತಿಲಲ್ಲಿಯೇ ನಿಂತಿವೆ ಎಂದು ಹೇಳಬಹುದಾಗಿದೆ.

ನಾನಿಲ್ಲಿ ಪ್ರಸ್ತಾಪಿಸುತ್ತಿರುವುದು ಇಂಥ ಧರ್ಮಗಳನ್ನಲ್ಲ, ವೃತ್ತಿ ಪರವಾದ ಧರ್ಮವನ್ನು ಪ್ರಾಣ ಜೀವಿಗಳ ಹಿಂಸೆಗೆ ಮಂಗಳ ಹಾಡಿದ ಧರ್ಮ, ಮಾನವ ಕ್ರೂರತನದಿಂದ ಸಂಪಾದಿಸಿದ ಮಾಂಸಾಹಾರವನ್ನು ತ್ಯಜಿಸುವಂತೆ ಮಾಡಿದ ಮಾನವೀಯ ಧರ್ಮ. ಸಕಲ ಜೀವಿಗಳಿಗೆ ಲೇಸನ್ನೇ ಬಯಸುವ ಮಹಾಧರ್ಮ, ಸೃಷ್ಟಿ ಜೀವಿಗಳಿಗಾಗಿ ಕೊಡಮಾಡಿದ ಸನಾತನ ಧರ್ಮ, ಎಂದೆಂದಿಗೂ ಬಾಡದ, ಅಳಿಯದ, ಅನಂತವಾದ ಧರ್ಮ, ಇಂಥದೊಂದು ಧರ್ಮ ಹಿಂದೆ ಇತ್ತು, ಇಂದೂ ಇದೆ, ಮುಂದೆಂದೂ ಇರುತ್ತದೆ, ಅದುವೇ ಹಾಲು ಮತ ಧರ್ಮ. ಹಾಲಿನಂತಹ ಗುಣವನ್ನು ಪಡೆದ ಧರ್ಮ. ಅಂತೆಯೇ 'ಹಾಲುಮತ' ಎಂಬ ಈ ಹೆಸರು ಪ್ರಾಪ್ತವಾಗಿದೆಯೆಂಬುದು ನನ್ನ ಅಭಿಪ್ರಾಯ.

ಉಳಿದ ಧರ್ಮಗಳಿಗಿರುವಂತೆ ಸಂಸ್ಥಾಪಕನಾಗಲೀ, ಪ್ರವಾದಿಯಾಗಲೀ, ಗುರುವಾಗಲೀ ಈ ಹಾಲುಮತ ಧರ್ಮಕ್ಕಿಲ್ಲ. ಸೃಷ್ಟಿಯೇ ಇದಕ್ಕೆ ಗುರು, ಪ್ರವಾದಿ, ಸಂಸ್ಥಾಪಕ. ಜನಪದರು ಪಶುಪಾಲಕ(ಕುರುಬ) ರನ್ನುದ್ದೇಶಿಸಿ ಮಾತನಾಡುವ ಅವರನ್ನು 'ಹಾಲುಮತದವರು' ಎಂಬ ಗೌರವಯುತವಾದ ಪದವನ್ನು ಮರೆಯದೇ ಉಪಯೋಗಿಸುತ್ತಾರೆ. ತಿಳಿದವರು, ತಿಳಿಯದೇ ಇರುವವರೂ ಹಾಗೂ ಬುದ್ಧಿ ಜೀವಿಗಳೂ ಹಾಲುಮತ ಧರ್ಮದ ಒಳಹೊರ ಮರ್ಮವನ್ನು ಸಂಪೂರ್ಣ ತಿಳಿದವರಾಗಿದ್ದಾರೆ.

ಹಾಲುಮತ ಧರ್ಮದ ತತ್ವ ಸಿದ್ಧಾಂತಗಳು, ಆಚಾರ–ವಿಚಾರಗಳು, ನಡೆ ನುಡಿಗಳು, ರೀತಿ ರಿವಾಜುಗಳು, ರೂಢಿ ಪದ್ಧತಿಗಳು, ಹಾಗೂ ಅವರು ಹಾಕಿಕೊಟ್ಟ ಹೊಸ ಹೊಸ ಮಾರ್ಗಗಳು ಪ್ರಪಂಚದ ಎಲ್ಲ ಧರ್ಮಗಳಲ್ಲಿ ಇಂದಿಗೂ ರೂಢಿಗತವಾಗಿ, ಪರಂಪರೆಯ ರೂಪದಲ್ಲಿ ಉಳಿದು ಬಂದಿವೆ.

ಹಾಲುಮತ ಧರ್ಮಕ್ಕೆ ತನ್ನದೇ ಆದ ಯಾವುದೇ ಲಿಖಿತ ಸಂವಿಧಾನವಾಗಲೀ, ನಿಯಮವಾಗಲೀ ಇಲ್ಲದಿದ್ದರೂ ಭಾವನಾತ್ಮಕ, ಆಧ್ಯಾತ್ಮಕ ಹಾಗೂ ಮಾನವೀಯ ಸಂವಿಧಾನ ಇದಕ್ಕೆ ಇರುವುದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಪ್ರಪಂಚದ ಯಾವುದೇ ಧರ್ಮ ಮಾನವೀಯತೆಯ ತಳಹದಿಯ ಮೇಲೆಯೇ ತನ್ನ ಸೌಧವನ್ನು ನಿಲ್ಲಿಸಿದ್ದು ಸತ್ಯ. ಪ್ರಾಣ ಹೊಂದಿದ ಯಾವುದೇ ಜೀವಕ್ಕೆ ದುಃಖವನ್ನುಂಟು ಮಾಡುವ ಮಾರ್ಗದಲ್ಲಿ ನಾವು ನಡೆಯಬಾರದು.

ಪ್ರಾಣಿ ಜನ್ಮವು ಬಾಳಿ ಬದುಕುವುದಕ್ಕೆ ಯಾವುದೇ ಅಡ್ಡಿ ಆತಂಕ ಒಡ್ಡದೇ, ತಾನು ಬಾಳಿ ಬದುಕುವುದರೊಂದಿಗೆ ಇತರರನ್ನು ಬಾಳಲು ಬಿಡಬೇಕು ಮತ್ತು ಬಾಳಲು ಸಹಕರಿಸಬೇಕು. ಭೂಮಿಗೆ ಬಂದವರೆಲ್ಲಾ ಸುಖಿಯಾಗಿ ಬಾಳಬೇಕು. 'ಸರ್ವೇ ಜನಃ ಸುಖಿನೋ ಭವಂತು' ಎಂಬ ತತ್ವ ಸಿದ್ಧಾಂತಗಳನ್ನು ಪಾಲಿಸಬೇಕು. ಧರ್ಮದ ಮೌಲ್ಯಗಳು ಕಾಲ ಕಾಲಕ್ಕೆ ಹಾಗೂ ಭೌಗೋಲಿಕ– ಪರಿಸರಕ್ಕೆ ತಕ್ಕಂತೆ ಬದಲಾಗುತ್ತಲೇ ಬಂದಿವೆ.

ಒಂದು ಕಾಲದ ಮೌಲ್ಯವು ಇನ್ನೊಂದು ಕಾಲಕ್ಕೆ ಶಿಥಿಲವಾಗಿ ಹಾಸ್ಯಾಸ್ಪದವಾಗುತ್ತದೆ. ಆದರೆ ಹಾಲುಮತ ಧರ್ಮ ತನ್ನದಾದ ಮಾನವ ಧರ್ಮವನ್ನು ಯಾವುದೇ ಬದಲಾವಣೆಗೆ ಗುರಿಪಡಿಸದೆ ಅನಾದಿ ಕಾಲದಿಂದ ಇಂದಿನವರೆಗೆ ತನ್ನದೇ ಆದ ಮಾರ್ಗದಲ್ಲಿ ಸಾಗಿ ಬಂದಿರುವದನ್ನು ಕಾಣುತ್ತೇವೆ. ಹಾಲುಮತ ಧರ್ಮದ ಜನರ ಬದುಕಿನ ಮೌಲ್ಯಗಳು, ಬಾಳುವ ಪದ್ಧತಿಗಳು, ಅನುಸರಿಸಿಕೊಂಡ ಬಂದ ರೀತಿ ರೀವಾಜುಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಬಂದಿರಬಹುದಾದರೂ ಮೂಲ ಉದ್ಧೇಶಕ್ಕೆ ಯಾವುದೇ ಚ್ಯುತಿ ಬಾರದಂತೆ ಸಾಗಿ ಬಂದಿರುವುದನ್ನು ಈ ಧರ್ಮದ ಅಧ್ಯಯನದಿಂದ ತಿಳಿದು ಬರುತ್ತದೆ.

"ಸೂರ್ಯ ಸಿದ್ಧಾಂತದ ಪ್ರಕಾರ ಸಮಸ್ತ ಜಗತ್ತಿನ ಉತ್ಪತ್ತಿ - ಸ್ಥಿತಿ ಲಯಗಳಿಗೆ ಕಾರಣೀಭೂತನಾದ ಪರಮಾತ್ಮನಿಂದ ನಿರ್ಮಿಸಲ್ಪಟ್ಟ ಶ್ರೀಮನ್ ನಾರಾಯಣನ ನಾಭಿ ಕಮಲದಿಂದ ಹುಟ್ಟಿದ ಬ್ರಹ್ಮನಿಗೆ ೧೦೦ ವರ್ಷ ಪರಮಾಯುಷ್ಯವು. ಇದರಲ್ಲಿ ೫೦ ವರ್ಷಗತಿಸಿ ೫೧ನೆಯ ವರ್ಷದಲ್ಲಿ ಮೊದಲನೆಯ ಮಾಸದ ಪ್ರಥಮ ಪಕ್ಷದ ೧ನೆಯ ದಿನದಲ್ಲಿ ೧೩ ಘಳಿಗೆ, ೫೩ ಘಳ ೩ ವಿಘಳಗಳು ಗತಿಸಿವೆ, ಎಂದು ರಟ್ಟಮತ (ಹಾಲುಮತ) ಶಾಸ್ತ್ರ ಹೇಳುತ್ತದೆ."[೪]

**ಹಾಲುಮತದ ಹುಟ್ಟು :**

'ಮತ' ಎಂದರೆ ಗುಟ್ಟು. ಎಲ್ಲ ಮತಗಳಿಗೆ ತನ್ನದೇ ಆದ ಗುಟ್ಟು ಇರುತ್ತದೆ. ಹಾಗೆ ಹಾಲುಮತಕ್ಕೂ ಇದೆ. 'ಆತ್ಮವತ್ಸರ್ವ ಭೂತಾನಿ ಸತ್ಯಂ ವಥಾ ಧರಂ ಚರಾ' ಎಂದರೆ ಎಲ್ಲರನ್ನೂ ತನ್ನಂತೆ ಪರಿಗಣಿಸುವುದು ಸತ್ಯ. ಧರ್ಮಯುತವಾದ ನಡುವಳಿಕೆಗಳು ಹಾಲುಮತದ ಸಿದ್ಧಾಂತಗಳು. ಹಾಲುಮತದ ಹುಟ್ಟಿನ ಬಗ್ಗೆ ಡೊಳ್ಳಿನ ಹಾಡುಗಳಲ್ಲಿ ಭಿನ್ನ ರೀತಿಯ ವಿಷಯಗಳು ಸಿಗುತ್ತವೆ.

ಮುದ್ದಪ್ಪ-ಮುದ್ದವ್ವರ ಹೊಟ್ಟೆಯಿಂದ ಆದಿಗೊಂಡ ಆತನ ಹೊಟ್ಟೆಯಿಂದ ಆರು ಜನ ಮಕ್ಕಳು ಹುಟ್ಟುತ್ತಾರೆ. ಮುಂದೆ ಇವರೇ ಹಾಲುಮತವನ್ನು ಬೆಳೆಸಿ ಉಳಿಸಿಕೊಂಡು ಹೋಗುತ್ತಾರೆ. ಇದರಲ್ಲಿ ಪದ್ಮಗೊಂಡನ ಪಾತ್ರ ತುಂಬಾ ಹಿರಿದಾಗಿದೆ. ಹತ್ತಿ ಕಂಕಣ, ಉಣ್ಣಿಕಂಕಣ, ಸಂಪ್ರದಾಯಕ್ಕೂ ಈತನೇ ಕಾರಣ. ಹುತ್ತಿನಿಂದ ಬಂದ ಕುರಿಗಳನ್ನು ಶಿವನಾಜ್ಞೆಯಂತೆ ಕಾಡಲ್ಲಿ ಮೇಯಿಸುತ್ತಿರುವಾಗ ಆರು ಜನ ಅನ್ನ ನೀರಿಲ್ಲದೇ ನಿರಾಹಾರವಿರುತ್ತಾನೆ.

ದಟ್ಟವಾದ ಕಾಡಲ್ಲಿ ಅವನಿಗೆ ಏನೂ ಸಿಕ್ಕಿರುವುದಿಲ್ಲ. ಆರನೇ ದಿನ ಶಿವ ಪ್ರತ್ಯಕ್ಷನಾಗಿ ನೀರು ಮತ್ತು ಬೆಂಕಿ ಬಗ್ಗೆ ತಿಳಿಸಿ ಕೊಡುತ್ತಾನೆ. ಈ ಬೆಂಕಿ ಶೋಧದ ಬಗ್ಗೆ ಕುರುಬರ ಹಾಡಲ್ಲಿ ಎರಡು ರೀತಿಯ ಭಿನ್ನ ನೆಲೆಗಳು ಕಂಡು ಬರುತ್ತವೆ.

ಹಸಿವಿನ ಬಳಲಿಕೆಯಿಂದ ಶಿವಸ್ಮರಣೆ ಮಾಡಲು, ಶಿವ ಒಲಿದು ಆಗ ತಾನೇ ಈದ ಕುರಿಯೊಂದನ್ನು ಹಿಡಿದು ಗಿಣ್ಣ ಕಾಯಿಸುತ್ತಾನೆ. ಗಿಣ್ಣ ಕಾಯಿಸಲು ಬೆಂಕಿ ಬೇಕಾದಾಗ ಬೆಂಕಿ ತರಲು ಶಿವ ಪದ್ಮಣ್ಣನನ್ನು ಕಾಡಿಗೆ ಕಳಿಸುತ್ತಾನೆ. ದೂರ ಕಾಡಿನಲ್ಲಿರುವ ಒಂದು ಮನೆಯಲ್ಲಿ ಬೆಂಕಿ ಕೇಳುತ್ತಾನೆ. ಅಲ್ಲಿ ಬಂಕಾಪುರದ ರಾಜನ ಮಗಳು ಸುಮಲಾದೇವಿ ರಾಕ್ಷಸಿಯ ವಶದಲ್ಲಿರುತ್ತಾಳೆ. ನನ್ನನ್ನು ಈ ಬಂಧನದಿಂದ ಬಿಡಿಸಿದರೆ ಬೆಂಕಿ ಕೊಡುವೆನೆಂದು ಹೇಳುತ್ತಾಳೆ. ಈ ರೀತಿ ಪರಸ್ಪರರಲ್ಲಿ ಪ್ರೀತಿ ಬೆಳೆದು ಮದುವೆಯಾಗುತ್ತದೆ. ಆಗ ಕುರಿಯ ಉಣ್ಣೆಯಿಂದ ಕಂಕಣ ಕಟ್ಟಿ ಮದುವೆಯಾಗುತ್ತಾನೆ. ಇಲ್ಲಿಂದ 'ಉಣ್ಣಿಕಂಕಣ' ವೆಂಬ ಇನ್ನೊಂದು ಸಂಪ್ರದಾಯ ಬೆಳೆದು ಬಂತು. ಈ ಹಿಂದೆ ಮನೆಯಲ್ಲಿ ಮದುವೆಯಾಗಿದ್ದ ಸಂಬಂಧಕ್ಕೆ 'ಹತ್ತಿ ಕಂಕಣ' ಸಂಪ್ರದಾಯವೆನ್ನುತ್ತಾ ಹೀಗೆ ಹಾಲುಮತ, ಹತ್ತಿಕಂಕಣ, ಉಣ್ಣಿಕಂಕಣ ಸಂಪ್ರದಾಯಗಳು ಕುರುಬರಲ್ಲಿ ಬೆಳೆದು ಬಂದಿರುವದನ್ನು ಕಾಣುತ್ತೇವೆ.

**ಹಾಲುಮತದ ನೆಲೆ-ಬೆಲೆ (ಪರಂಪರೆ) :**

ರಸ್ತಾಮರ ಭೀಮಕವಿಯಿಂದ ರಚಿಸಲ್ಪಟ್ಟ ಶ್ರೀ ರೇವಣಸಿದ್ಧೇಶ್ವರ ಲೀಲಾ ಸಂಯುಕ್ತ ಹಾಲ್ಮತೋತ್ತೇಜಕ ಪುರಾಣ ಮತ್ತು ಡಾ. ವೀರಣ್ಣ ದಂಡೆಯವರಿಂದ ಸಂಪಾದಿಸಲ್ಪಟ್ಟ 'ಜನಪದ ಹಾಲುಮತ ಮಹಕಾವ್ಯ' ಇವೆರಡೂ ಸದ್ಯಕ್ಕೆ ಹಾಲು ಮತದ ಅಧೀಕೃತ ಮಾಹಿತಿಯನ್ನೊದಗಿಸಿದ ಮೂಲ ಆಕರ ಗ್ರಂಥಗಳು. ಈ ಕೃತಿಗಳು ಮೌಖಿಕವಾಗಿದ್ದರೂ ಜನಪದ ಪುರಾಣ ಕೃತಿಯಾಗಿದೆ. ವಿಸ್ತಾರವಾಗಿ ಹಬ್ಬಿರುವ ಈ ಕೃತಿ ಹಾಲುಮತದ ಪೌರಾಣಿಕ ನೆಲೆಗಳನ್ನು ತಿಳಿಸುತ್ತದೆ.

ನಿಸರ್ಗದ ಒಂದೊಂದೇ ಅಂಶಗಳು ಹುಟ್ಟುತ್ತ ಗಾಳಿ ಭೂಮಿ, ಆಕಾಶಗಳ ಸೃಷ್ಟಿಯ ನಂತರ ಮುಂದೆ ಬ್ರಹ್ಮ ವಿಷ್ಣು, ರುದ್ರ, ಮಹೇಶ, ಮಹಾದೇವ, ಇವರುಗಳ ಜೊತೆ ಹಾಲುಮತದ ಪೂಜ್ಯ ಹಿರಿಯನಾದ ಶಾಂತಮುತ್ತ್ಯಾನ ಜನನ ಕೈಲಾಸದಲ್ಲಿಯೇ ಆಯಿತೆಂದು ಹೇಳಲಾಗುತ್ತದೆ. ಈ ಶಾಂತಮುತ್ತ್ಯಾನೇ ಅಲ್ಲಿ ಜನಿಸಿದ ರಾಕ್ಷಸರನ್ನು ಕೊಂದು ಹಾಲುಮತದ ಜೊತೆಗೆ ಸಂಬಂಧ ಬೆಳಿಸಿಕೊಂಡಿರುವ ಕುರಿಗಳನ್ನು, ಡೊಳ್ಳನ್ನು ಮತ್ತು ಕಂಬಳಿಯನ್ನು ತಯಾರಿಸುತ್ತಾನೆ.

ಶಾಂತಮುತ್ತ್ಯಾ ನಿರ್ಮಿಸಿದ ಕುರಿಗಳನ್ನು ಬ್ರಹ್ಮ, ವಿಷ್ಣು, ಶಿವ ಮುಂತಾದವರು ಕಾಯುತ್ತಾ ಕೊನೆಗೆ ಪಾರ್ವತಿಯ ಪಾಳಿ ಬರುತ್ತದೆ. ಆಕೆ ಆ ಕುರಿಗಳನ್ನು ಕಾಯುತ್ತ ಆಕಾಶದ ಬಾಗಿಲು ತೆರೆದು ಭೂಲೋಕಕ್ಕೆ ಹೊಡೆತರುತ್ತಾಳೆ. ಮತ್ತು ಭೂಮಿಯ ಒಂದು ಹುತ್ತಿನಲ್ಲಿ ಅವುಗಳನ್ನು ಹೊಗಿಸುತ್ತಾಳೆ. ಇಲ್ಲಿ ಭೂಮಿಯ ಮೇಲೆ ಮೊದಲು ಪಾದಾರ್ಪಾಣೆ ಮಾಡಿದಾಕೆ ಹೆಣ್ಣು – ಪಾರ್ವತಿ ಮತ್ತು ಪ್ರಾಣಿ ಸಂತತಿಯಾಗಿ ಭೂಮಿಯಲ್ಲಿ ಕಾಣಿಸಿಕೊಂಡ ಭೂಮಿಯ ಗರ್ಭದಲ್ಲಿ ಕುರಿಗಳು ವಾಸವಾದವು ಎಂಬ ಸಂಗತಿಗಳನ್ನು ಮುಖ್ಯವಾಗಿ ಪ್ರತಿಬಿಂಬಿಸಲು ಪ್ರಯತ್ನ ಮಾಡಲಾಗಿದೆ.

ಕುರಿಗಳನ್ನು ಹುತ್ತಿನಲ್ಲಿ ಹೊಗಿಸಿ ಭೂಮಿಯ ಮೇಲೆ ಕುಳಿತುಕೊಂಡ ಪಾರ್ವತಿ ತನ್ನ ಬಲಕಿನ ಕೈಯಿಂದ ಭೂಮಿಯ ಮಣ್ಣನ್ನು ಹಿಡಿದು, ತನ್ನ ಎಡಕಿನ ಕೈಯಿಂದ ಬಲಮೊಲೆಯ ಹಾಲನ್ನು ಹಿಂಡಿ ಕೆಸರು ಮುದ್ದೆ ಮಾಡುತ್ತಾಳೆ. ಹಾಗೆಯೇ ಎಡಕಿನ ಕೈಯ ಮಣ್ಣಿಗೆ ಬಲಗೈಯಿಂದ ಎಡಕಿನ ಮೊಲೆಯ ಹಾಲನ್ನು ಹಿಂಡಿ ಕೆಸರು ಮುದ್ದೆ ಮಾಡುತ್ತಾಳೆ. ಬಲಗೈ ಮಣ್ಣಿನಿಂದ ಗಂಡು ಬೊಂಬೆಯನ್ನೂ, ಎಡಗೈ ಮಣ್ಣಿನಿಂದ ಹೆಣ್ಣು ಬೊಂಬೆಯನ್ನು ನಿರ್ಮಾಣ ಮಾಡುತ್ತಾಳೆ. ಅಷ್ಟೊತ್ತಿಗೆ ಅಲ್ಲಿಗೆ ಬಂದ ಶಿವನಿಂದ ಮಂತ್ರಿಸಿ, ಆ ಗೊಂಬೆಗಳಿಗೆ ಜೀವ ತುಂಬಿಸುತ್ತಾಳೆ. ಅವಕ್ಕೆ "ಮುದ್ದವ್ವ ಮುದ್ದುಗೊಂಡನೆಂದು ಹೆಸರಿಡುತ್ತಾರೆ." ಇವರೇ ಹಾಲು ಮತ ಪುರಾಣದ ಮೂಲ ಪುರುಷರು ಎಂದು ಹೇಳಲಾಗುತ್ತದೆ.

ಮುದ್ದವ್ವ– ಮುದ್ದುಗೊಂಡ ಒಕ್ಕಲುತನ ಮಾಡಿಯೇ ಬದುಕನ್ನು ಸಾಗಿಸುತ್ತಿದ್ದರು ಎಂದು ಹೇಳುವ ಕಥೆ ಇವರ ಮಗ ಪದುಮಗೊಂಡ ಅಡವಿಯಲ್ಲಿ ನೇಗಿಲು ಹೊಡೆಯಲು ಹೋಗಿ,

ಒಂದು ಹುತ್ತ ಸೀಳಿದ್ದರಿಂದ, ಅಲ್ಲಿ ಪಾರ್ವತಿ ಹೊಗಿಸಿದ್ದ ಕುರಿಗಳು ಅನೇಕ ಸಂಖ್ಯೆಯಲ್ಲಿ ಆಗಿ ಹೊರಬಂದವೆಂದು ಹೇಳಲಾಗುತ್ತದೆ. ಇಲ್ಲಿ ಭೂಮಿಯ ಗರ್ಭ ಸೇರಿದ್ದ ಕುರಿಗಳು ಪುನಃ ಭೂಮಿಯ ಮೇಲೆ ಕಾಣಿಸಿಕೊಂಡಿದ್ದು ಪೌರಾಣಿಕ ಸೃಷ್ಟಿಯಂತೆಯೇ ಇದೆ.

ಮುಂದೆ ಕುರಿ ಕಾಯುತ್ತ ಹೊರಟ ಪದುಮಗೊಂಡನಿಗೆ ಹಾಲು ಹಿಂಡಿಕೊಳ್ಳುವ, ಗಿಣ್ಣ ಮಾಡುವ ಪರಿಗಳನ್ನು ಕಲಿಸಿದ್ದಲ್ಲದೆ, ಶಿವನು ಶಿವಲಿಂಗಮ್ಮನ ಜೊತೆ ಪದುಮಗೊಂಡನ ಮದುವೆ ಮಾಡುತ್ತಾನೆ. ಸುರಗಿ ಸುತ್ತಲು ನೂಲು ಸಿಗದಿದ್ದಾಗ ಉಣ್ಣೆಯ ಕಂಕಣವನ್ನೇ ಕಟ್ಟಿದರೆಂದು ಹೇಳಿ, ಕುರುಬ ಜನಾಂಗದಲ್ಲಿರುವ ಹತ್ತಿ ಕಂಕಣ ಮತ್ತು ಉಣ್ಣೆಕಂಕಣ ಪಂಗಡಗಳಿಗೆ ಮತ್ತೊಂದು ಪೌರಾಣಿಕ ನೆಲೆಯನ್ನೇ ಒದಗಿಸಲಾಗುತ್ತದೆ. ಈ ದಂಪತಿಗಳು ತಮಗೆ ಹುಟ್ಟಿದ ಮಗುವಿಗಾಗಿ ಹುಟ್ಟುಗಂಬಳಿ ನೇಯುವ ಕೆಲಸ ಮಾಡುತ್ತಾರೆ. ಇವರು ನೇಯ್ದ ಕಂಬಳಿಯೇ ಭೂಮಿಯ ಮೇಲೆ ತಯಾರಾದ ಮೊದಲ ಕಂಬಳಿ ಎನಿಸುತ್ತದೆ.

ಹಾಲುಮತ ಕಾವ್ಯದ ನಾಯಕನ ಸೃಷ್ಟಿಗೆ ಕಾರಣನಾದವನೂ ಶಿವನೇ. ಶಿವನ ದೈಹಿಕ ಸಂಪರ್ಕವಿಲ್ಲದೆ ಕೇವಲ ಲೀಲಾ ಸದೃಶವಾಗಿ ಕಮಳಾದೇವಿ ಗರ್ಭ ಧರಿಸಿದಳೆಂದು ಕಾವ್ಯ ಹೇಳುತ್ತದೆ. ಆದರೆ ಈಕೆ ಗಂಡನಿಲ್ಲದೆ ಬಸುರಿ ಹೇಗಾದಳು? ಎಂಬ ಪ್ರಶ್ನೆ ಎದುರಾಗುತ್ತದೆ. ಅದಕ್ಕಾಗಿ ದಾಸಿಯರು, ಅರಸನಿಗೆ ತಿಳಿಯದಂತೆ ಕೊರವಂಜಿಯ ವೇಷದಲ್ಲಿರುವ ಪಾರ್ವತಿಯ ಬುಟ್ಟಿಗೆ ಈ ಮಗುವನ್ನು ಹಾಕುತ್ತಾರೆ. ಆದರೆ ಶಿವನು ದಾರಿಯಲ್ಲಿ ಹದ್ದಾಗಿ ಹಾರಿ ಬಂದು ಬುಟ್ಟಿಯಲ್ಲಿರುವ ಕೂಸನ್ನು ಅಪಹರಿಸುತ್ತಾನೆ.

ಅಪಹರಿಸಿದ ಈ ಕೂಸನ್ನು ಜಂಬೂದ್ವೀಪದ ಒಂದು ಕೊಳದ ಕಮಲದ ಹೂವಿನಲ್ಲಿ ಮಲಗಿಸುತ್ತಾನೆ. ಶಿವನ ಪೂಜಾರಿಯಾದ ಕಾಳಿನಾರಾಯಣನಿಂದ ಕಮಲದ ಹೂವಿನ ಜೊತೆ ಕೂಸು ಕೈಲಾಸಕ್ಕೆ ಬರುವಂತೆ ಮಾಡಿ ಈ ಕೂಸನ್ನು ಸಲುಹಲು ಪಾರ್ವತಿಗೆ ಒಪ್ಪಿಸುತ್ತಾನೆ.

ಬಾಳಭರಮ ಮತ್ತು ಸೂರಮ್ಮದೇವಿಯವರು ಶಿವನ ಬೆವರನ್ನು ಸೇವಿಸಿದಾಗ ಬೀರಪ್ಪ ಗರ್ಭದಲ್ಲಿ ಮೂಡುತ್ತಾನೆ. ಸೋದರಮಾವ ಬೀರಪ್ಪನಿನ್ನೂ ಗರ್ಭದಲ್ಲಿರುವಾಗಲೇ ಅವನನ್ನು ಸಂಹರಿಸಲು ಪ್ರಯತ್ನಿಸಿದಾಗ ಬೀರಪ್ಪನು ತನ್ನ ತಾಯಿಯ ಕನಸಿನಲ್ಲಿ ಅದನೆಲ್ಲ ಅರಹುತ್ತಾನೆ. ಬಾಣಂತನದ ಸಮಯದಲ್ಲಿ ಕೂಸನ್ನು ಕೊಲ್ಲಲು ಕಾಳಿನಾರಾಯಣನು ಸೂಲಗಿತ್ತಿಯರನ್ನು ಕಳುಹಿಸಿದರೆ, ಬೀರಪ್ಪನು ಗರ್ಭದಿಂದ ಸಿಡಿದು ನಿಂತು ಸೂಲಗಿತ್ತಿಯರನ್ನು ಒದ್ದೋಡಿಸಿ ಮತ್ತೆ ಮಗುವಾಗಿ ತಾಯಿಯ ಮಗ್ಗುಲಲ್ಲಿ ಮಲಗುತ್ತಾನೆ.

ಕೊನೆಗೆ ಸೋದರ ಮಾವನು ಮಗುವಿನ ಹಣೆಬರಹ ನೆಟ್ಟಗಿಲ್ಲವೆಂದು ತಂಗಿಗೆ ಹೇಳಿ ಅದನ್ನು ಅರಣ್ಯದಲ್ಲಿ ಬಿಟ್ಟುಬರಲು ಪೈಲವಾನರನ್ನು ಕಳುಹಿಸುತ್ತಾನೆ. ತಾಯಿ

ಕೂಸನ್ನು ಅರಣ್ಯಕ್ಕೆ ಸಾಗಿಸಲು ತೊಟ್ಟಿಲಲ್ಲಿ ಹಾಕಿ ಕೊಡುತ್ತಾಳೆ. ನಾಲ್ಕು ಜನ ಪೈಲವಾನರಿಗೆ ಈ ತೊಟ್ಟಿಲು ಏಳದೇ ಇದ್ದಾಗ ತಾಯಿ ಕೈ ತಾಕಿಸಿದರೆ ತೊಟ್ಟಿಲು ಹಗುರವಾಗಿ ಏಳುತ್ತದೆ. ಪೈಲವಾನರು ಈ ತೊಟ್ಟಿಲನ್ನು ವನಕ್ಕೆ ಸಾಗಿಸಿ ಒಣಗಿದ ಕಂಚಿನಾಲದ ಮರದ ಟೊಂಗೆಗೆ ಕಟ್ಟಿ ಬರುತ್ತಾರೆ. ಆ ಮರ ಚಿಗಿತು ನಿಲ್ಲುತ್ತದೆ. ಶಿವ-ಪಾರ್ವತಿಯರು ಬಂದು, ಜೇನು ಕೂಸಿನ ಬಾಯಿಗೆ ಬೀಳುವಂತೆ ವ್ಯವಸ್ಥೆ ಮಾಡುತ್ತಾರೆ.

ಈ ಕಾವ್ಯದ ಇನ್ನೊಬ್ಬ ಪ್ರಮುಖ ವ್ಯಕ್ತಿಯಾದ ಮಾಳಿಂಗರಾಯನ ಜನನವು ಪೌರಾಣಿಕ ಆಶಯಗಳಿಂದ ಕೂಡಿದೆ. ಶಿವ-ಪಾರ್ವತಿಯರು ತಮ್ಮಲ್ಲಿರುವ ಒಂದೊಂದು ಮಣಿಗಳನ್ನು ಕೊಡಲಾಗಿ ಅವನ್ನು ಜಗುಲಿಯ ಮೇಲೆ ಕೂಡಿಸಿ ಇಟ್ಟಾಗ ಜಕ್ಕಪ್ಪ ಮತ್ತು ಮಾಳಪ್ಪರಾಗಿ ಜನ್ಮ ತಾಳಿರುತ್ತಾರೆ.

ಹೀಗೆ ಈ ಕಾವ್ಯದ ಪ್ರಮುಖ ಪ್ರಾತ್ರಗಳಾದ ಬಾಳಭರಮ, ಬೀರಪ್ಪ ಮತ್ತು ಮಾಳಿಂಗರಾಯರ ಜನನಗಳು ಪೌರಾಣಿಕ ಆಶಯಗಳಿಂದ ಕೂಡಿವೆ. ಈ ನಿರೂಪಣೆಯಿಂದಾಗಿ ಇಲ್ಲಿಯ ವ್ಯಕ್ತಿತ್ವಗಳ ಶಕ್ತಿಗೆ ಒಂದು ಅಲೌಕಿಕ ಸ್ಪರ್ಶ ಪ್ರಾರಂಭದಿಂದಲೇ ಲೇಪನಗೊಂಡಂತಾಗಿರುತ್ತದೆ. ಜೊತೆಗೆ ಇವರ ಸಾವಿನ ಸಂಗತಿಗಳನ್ನು ಈ ಕಾವ್ಯ ಹೇಳುವುದೇ ಇಲ್ಲ. ಕಥೆ ಬೆಳೆದಂತೆಲ್ಲಾ ಆಯಾ ಪಾತ್ರದ ಬೆಳವಣಿಗೆಗಳು ಅಲ್ಲಲ್ಲಿಯೆ ಕರಗಿ ಹೋಗುತ್ತವೆ.

ಮಾಯವ್ವ ಸ್ವರ್ಗದ ದಂಪತಿಗಳ ಕೂಸಾಗಿಯೂ ಕೆಟ್ಟ ಹಣೆಬರಹ ಹೊಂದಿದ್ದರಿಂದ ಭೂಲೋಕದಲ್ಲಿ ಸಮುದ್ರದ ಪಾಲಾಗುತ್ತಾಳೆ. ಸಮುದ್ರದ ದಂಡೆಯಲ್ಲಿ ಒಬ್ಬ ಋಷಿಗೆ ದೊರೆತ ಈ ಕೂಸು, ನಂತರ ಕುರಿ ಕಾಯುವ ದಿಬರಾಯನ ಏಳು ಮಂದಿ ಹೆಣ್ಣು ಮಕ್ಕಳಿಗೆ ದೊರೆಯುತ್ತದೆ. ಈ ಕೂಸನ್ನು ಎತ್ತಿಕೊಂಡು ಮನೆಗೆ ಒಯ್ದರೆ ಗರ್ಭ ಧರಿಸದೇ ಒಣಗಿ ನಿಂತ ಇಡೀ ಕುರಿಗಳ ಹಿಂಡಿನ ಲಕ್ಷಣ ಒಂದೇ ರಾತ್ರಿಯಲ್ಲಿ ಬದಲಾಗುತ್ತದೆ. ಮುಂದೆ ಅವು ಗರ್ಭ ಧರಿಸುತ್ತವೆ. ಮಾಯವ್ವಳ ಪ್ರವೇಶದಿಂದಾಗಿ ಸಂತತಿ ಫಲಿಸುತ್ತದೆ.

ಇಂತಹದೇ ವಿವರಣೆಯನ್ನು ಮುಂದೆ ಮಾಯವ್ವಳ ವ್ಯಕ್ತಿತ್ವದಲ್ಲಿ ಬೆರೆಸಿ ಹೇಳಲಾಗುತ್ತದೆ. ಕೂಸು ಬೀರಪ್ಪನನ್ನು ಅಡವಿಯಲ್ಲಿ ಕಂಚಿನಾಲದ ಮರಕ್ಕೆ ಹಾಕಿ ಕಟ್ಟಿಲಾಗಿರುತ್ತದೆ. ಕುರಿ ಕಾಯುತ್ತ ಅಕ್ಕನೊಂದಿಗೆ ಅಲ್ಲಿಗೆ ಬಂದ ಮಾಯವ್ವ ಗಿಡದಲ್ಲಿಯ ತೊಟ್ಟಿಲ್ಲನ್ನು ಗಮನಿಸುತ್ತಾಳೆ. ತೊಟ್ಟಿಲನ್ನು ಅಕ್ಕತಂಗಿ ಪ್ರಯತ್ನಿಸಿ ಕೆಳಗೆ ಇಳಿಸುತ್ತಾರೆ. ಇಳಿಸಿದ ನಂತರ ಈ ಕೂಸು ಅಕ್ಕನಿಗೆ ಸೇರಬೇಕೋ? ಅಥವಾ ತಂಗಿಗೆ ಸೇರಬೇಕೋ ಎಂಬ ಬಗ್ಗೆ ಜಿಜ್ಞಾಸೆ ನಡೆಯುತ್ತದೆ. ಅಲ್ಲಿಗೆ ಬಂದ ಹಿರಿಯನೊಬ್ಬ ಮಡಿಯಿಂದ ತೊಟ್ಟಿಲನ್ನು ಸುತ್ತಿದರೆ ಯಾರ ಎದಿಬದಿಗಳು ಚಿಗಿತು ನಿಲ್ಲವವೋ ಅವರು ಕೂಸನ್ನು ಪಡೆಯಬಹುದು ಎಂದು ಸಲಹೆ ಕೊಡುತ್ತಾನೆ. ಅದಕ್ಕೆ ಸಹೋದರಿಯರಿಬ್ಬರೂ ಒಪ್ಪುತ್ತಾರೆ.

ತಂಗಿ ಮಾಯವ್ವಳು ಮಡಿಯಿಂದ ತೊಟ್ಟಿಲಿನ ಸುತ್ತ ತಿರುಗಲು ಆಕೆಯ ಎದಿಬದಿಗಳು ಚಿಗಿತು ಬಾಣಂತಿಯ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಆ ಮಾಯವ್ವ ಜನಕ್ಕೆ ಅಕ್ಕನಾಗಿ, ಮನಕ್ಕೆ ತಾಯಿಯಾಗಿ ಬೀರಪ್ಪನ ಸಂರಕ್ಷಣೆ ಮಾಡುತ್ತಾಳೆ.

ಕಾಲಾಂತರದಲ್ಲಿ ಕುರಿಗಳಿಂದ ದೊರಕುವ ಹಾಲು ಮಾನವನ ಬದುಕಿಗೆ ಮೂಲಾಧಾರ ಮತ್ತು ಪೂರ್ಣಾಹಾರ ಎಂಬುದನ್ನು ಅರಿತ ಮೇಲೆ ಪ್ರಾಣಿಗಳನ್ನು ಕೊಂದು ತಿನ್ನುವುದಕ್ಕಿಂತ ಅವುಗಳನ್ನು ಸಾಕಿ ಸಲುಹಿ, ಅವುಗಳಿಂದ ಪಡೆದ ಹಾಲಿನಿಂದ ದೊರಕುವ ನಾನಾ ವಿಧದ ಅನುಕೂಲತೆಯನ್ನು ಮನಗಂಡನು. ನಂತರ ಮಾನವನಲ್ಲಿ ಸಾಕಷ್ಟು ಮಾನವೀಯತೆಯ ಪರಿವರ್ತನೆಗಳಾದವು. ಹಾಲು ಮಾಂಸಾಹಾರಕ್ಕಿಂತ ಸಾವಿರ ಪಟ್ಟು ಉತ್ತಮ ಎಂಬ ಅಂಶ ಮಾನವನಿಗೆ ತಿಳಿದಾಗ ಹಾಲಿನ ಜನಕರಾದ ಇವರು 'ಹಾಲು ಮತದವರು' ಎಂದು ಕರೆಯಲ್ಪಟ್ಟರು.

ಇಂದು ಸಾಮಾನ್ಯವಾಗಿ ಕುರುಬರು ಮತ್ತು ಹಾಲುಮತದವರು ಅಭಿನ್ನರು ಎಂಬ ವಿಷಯ ಎಲ್ಲರಿಗೂ ತಿಳಿದ ಸಂಗತಿ. ಕುರಿ ಸಾಕುವವರನ್ನು ಕುರುಬರು, ದನ ಕಾಯುವವರನ್ನು ದನಗಾರರು, ಗೋಪಾಲಕರನ್ನು ಗೊಲ್ಲರು, ಎಮ್ಮೆ ಸಾಕುವವರನ್ನು ಗೌಳಿಗರು ಎಂದೆಲ್ಲ ಬಗೆ ಬಗೆಯಾಗಿ ಇಂದು ಕರೆಯುತ್ತಿದ್ದರೂ ಇವರೆಲ್ಲರ ಮೂಲ ಉದ್ಯೋಗ ಹೈನುಗಾರಿಕೆಯೇ ಆಗಿದ್ದರಿಂದ ಇವರೆಲ್ಲರೂ ಹಾಲುಮತವರೇ ಆಗಿದ್ದಾರೆ.

ಪ್ರಾರಂಭದಲ್ಲಿ ಈ ಎಲ್ಲ ತರಹದ ಪಶು ಪಾಲಕರನ್ನು 'ಕುರುಬರು' ಎಂಬ ಸಾಮಾನ್ಯ ಅರ್ಥದ ಅಡಿಯಲ್ಲಿ ನೋಡಲಾಗುತ್ತಿತ್ತು. ಎಲ್ಲ ಬಗೆಯ ಪಶು ಪಾಲಕರ ಹೆಸರುಗಳು 'ಹಾಲುಮತ' ದವರ ಪರ್ಯಾಯ ನಾಮಗಳೇ ಆಗಿವೆ ಎಂದು ಹೇಳಬಹುದು. ಹೀಗೆ ಹಾಲುಮತದ ಪರಂಪರೆ ಬೆಳೆದು ಬಂದಿದೆ.

. . .

## : ಟಿಪ್ಪಣಿಗಳು :

೧) ಗರತಿಯರ ಹಾಡು : ಸಂಗ್ರಹ : ಹಲಸಂಗಿ ಚನ್ನಮಲ್ಲಪ್ಪ ಮತ್ತು ಗೆಳೆಯರು : ಪುಟ–೧೩೮ ಪ್ರ.ವರ್ಷ : ೧೯೬೧

೨) ಅದೇ : ಪುಟ–೫೮

೩) ಅದೇ : ಪುಟ–೬೦

೪) ಕುರುಬರ ಹೆಜ್ಜೆಗಳು : ಒಂದು ಅಧ್ಯಯನ : ಲೇ : ಚಂದ್ರಕಾಂತ ಬಿಜ್ಜರಗಿ : ಪುಟ–೧೧ ಪ್ರ.ವರ್ಷ : ೨೦೦೬

ಅಧ್ಯಾಯ -೪

# ಹಾಲುಮತ ದೈವಗಳ ಆಚರಣೆ ಮತ್ತು ನಂಬಿಕೆ

ತನ್ನ ನೇರವಾದ ಅನುಭವಕ್ಕೆಂದು ಅನೇಕ ವಸ್ತು ಸಂಗತಿಗಳನ್ನು ತಮ್ಮ ನಂಬಿಕೆಗೆ ಮೂಲ ದ್ರವ್ಯವಾಗಿ ಪರಿಭಾವಿಸಿ ಅದನ್ನೇ ಅಚಲ ನಿಷ್ಠೆಯಲ್ಲಿ ಪರಿವರ್ತಿಸಿಕೊಂಡು ಆ ವಸ್ತುವನ್ನು ದೈವೀಕರಣಗೊಳಿಸಿ ಪೂಜಿಸುವ ಪರಂಪರೆ ಪ್ರಪಂಚದ ಅನೇಕ ಜನಪದ ವೃಂದಗಳಲ್ಲಿರುವುದನ್ನು ಕಾಣುತ್ತೇವೆ.

ಪ್ರಾಚೀನ ಮಾನವನಿಗೆ ವ್ರತಾಚರಣೆ ಅಥವಾ ಪೂಜಾ ವಿಧಿ, ಅರ್ಚನಾ ವಿಧಾನಗಳೆಂದರೆ, ಎಲ್ಲೆಲ್ಲೋ ಇರುವ ತನಗೆ ಅನನ್ಯವಾದ ಶಕ್ತಿಯ ಆರಾಧನೆಯಾಗಿರಲಿಲ್ಲ; ಉತ್ಸವವಾಗಿರಲಿಲ್ಲ. ಅದು ತನಗೆ ಅಗೋಚರ ಮಾತ್ರ. ತಾನು ಕೈಕೊಳ್ಳುವ ವ್ರತಾಚರಣೆ, ವಿಧಿಕ್ರಿಯೆ, ಉತ್ಸವ, ನೃತ್ಯ, ಹಾಡು, ಸ್ತುತಿ, ವ್ರತ, ಕಥೆ ಇತ್ಯಾದಿಗಳು ಆ ಶಕ್ತಿಯ ಜೊತೆ ಇಲ್ಲಿಯೇ ಈಗಾಗಲೇ ಪಡೆಯಬಹುದಾದ ನಿಸರ್ಗದ ಅನೇಕ ಸಂಪರ್ಕ ಸಾಧನಗಳಾಗಿದ್ದವು. ಹೀಗಾಗಿ ವಸ್ತುಗಳನ್ನು- ಪ್ರಾಣಿ, ಮರ, ಬೆಟ್ಟ,ಬಂಡೆ, ಪೂಜಿಸುವ ಕುಲಸಂಕೇತ. ಕುಲದೇವತಾರಾಧನೆ, ಬುಡಕಟ್ಟುಗಳ ಅಗಣಿತ ಕುಲಗುಂಪು, 'ಬಳಿ' ಅದಕ್ಕನುಗುಣವಾದ ಸಾಮಾಜಿಕ ವಿಧಿ ನಿಷೇಧಗಳು ರೂಪಗೊಂಡವು. ಪ್ರಾದಿಮ ಕಾಲದಿಂದ ಬಂದ ಸರ್ವ ಚೈತನ್ಯವಾದ ಆ್ಯನಿಮಿಜಮ್- ತಾತ್ವಿಕ ಹಿನ್ನೆಲೆಯ ಒಂದು ಆಚರಣೆ, ಯಜಮಾನ ಪೂಜೆ, ಯಾವುದೇ ಪ್ರಾಣಿ ಅಥವಾ ವ್ಯಕ್ತಿಗೆ ತನ್ನದೇ ಆದ ಆತ್ಮವಿದೆ.

ವ್ಯಕ್ತಿ ಸತ್ತ ಮೇಲೂ ಆತ್ಮ ನಾಶವಾಗುವುದಿಲ್ಲ. ಅವಿನಾಶಿ, ಇದು ಶಿಕ್ಷಾ, ರಕ್ಷಾ ಸಾಮರ್ಥ್ಯ ಹೊಂದಿರುತ್ತದೆ. ಟೇಯಲರ್ ಈ ನಂಬಿಕೆಯನ್ನು ಆತ್ಮತತ್ತ್ವ ಎಂದು ಕರೆಯುತ್ತಾನೆ. ಇದು ಅಲೌಕಿಕ, ಅನಿಯಂತ್ರಿತ, ಪ್ರಪಂಚದ ಅನೇಕ ಕಡೆಗಳಲ್ಲಿ ಮತ್ತು ನಮ್ಮಲ್ಲಿ ಇಂದಿಗೂ ಇಂಥ ಒಂದು ನಂಬುಗೆಯ ಆಚರಣೆ ಕಾಣುತ್ತದೆ.

ವ್ಯಕ್ತಿ ಸತ್ತ ಸ್ಥಳದಲ್ಲಿ ಒಂದು ದಿನವಾದರೂ ದೀಪ ಉರಿಸುವುದು, ಮೂರು, ಒಂಭತ್ತು ಅಥವಾ ಹನ್ನೊಂದನೆ ದಿನ ಆ ವ್ಯಕ್ತಿಯ ಪ್ರಿಯವಾದ ಭಕ್ಷ್ಯ ಭೋಜನಗಳನ್ನು ಎಡೆ ಮಾಡುವುದು, 'ಒಳಗೆ ಕರೆದುಕೊಳ್ಳುವುದು' ಇದನ್ನೇ 'ಅನ್ಸಿಸ್ಟ್ರಲ್ ವರ್ಷಿಪ್' 'ಹಿರೇರ ಹಬ್ಬ' ಎಂದು ಕರೆಯುವರು. ಈ ಆತ್ಮಗಳನ್ನು ಸಂತೃಪ್ತಿಪಡಿಸದಿದ್ದರೆ ಅವು ಕೇಡು ಮಾಡಬಹುದು,ಆದುದರಿಂದ ಅವುಗಳನ್ನು ಪೂಜಿಸುವ ಆಚರಣೆ ಒಂದು ವಿಧಿ.

ರಾಯಬಾಗ ತಾಲೂಕಿನ ಹಾಲುಮತದಲ್ಲಿ ಈ ಕೆಳಗಿನ ಪ್ರಮುಖವಾದ ನಂಬಿಕೆ ಆಚರಣೆಗಳನ್ನು ಪಟ್ಟಿ ಮಾಡಬಹುದಾಗಿದೆ.

೧) ಕಂಬಳಿಯ ಮಹತ್ವ
೨) ಅಲಗ ಹಾಯುವುದು
೩) ಭಂಡಾರದ ವೈಶಿಷ್ಟ್ಯ
೪) ಡೊಳ್ಳು ವಾದ್ಯದ ವೈಶಿಷ್ಟ್ಯ
೫) ಹಾಲುಗಂಭದ ಆಚರಣೆ
೬) ಕರಿ ಕಟ್ಟು/ಹರಿಯುವುದು

**ಕಂಬಳಿ ಸಿದ್ಧಪಡಿಸುವಿಕೆ ಮತ್ತು ಅದರ ಮಹತ್ವ :**

ದೇವತೆಗಳಲ್ಲಿ ಕೆಲವರು ಉಣ್ಣೆಯನ್ನು ಹಿಂಜುತಿದ್ದರೆ ಮತ್ತೆ ಕೆಲವರು ಬಿಂಗರಿಗಳಿಂದ ನೂಲು ತೆಗೆಯುತಿದ್ದರು. ವಿಶ್ವಕರ್ಮ ಶಕ್ತಿಯಿಂದ ಮಗ್ಗಗಳೂ ಸಿದ್ಧಗೊಂಡವು. ನಂದಿಯು ಮಗ್ಗದ ತಗ್ಗು ತೊಡಿದನು. ಕೌರವರು ಮಗ್ಗಗಳನ್ನು ಪ್ರಸ್ಥಾಪಿಸಿದರು. ಅನಂತರದಲ್ಲಿ ಅವರು ಶಿವನನ್ನು ದಯ ಮಾಡಿಸಿಕೊಂಡು ಮಗ್ಗದಲ್ಲಿ ಕುಳ್ಳಿರಿಸಿದರು. ವಿಷ್ಣು ಮತ್ತು ಬ್ರಹ್ಮರು ಲಾಳಿ ಒಗೆದರು.

ವಿಶ್ವವನ್ನು ನಿರ್ಮಿಸಿದ ದೇವದೇವನು ತನ್ನ ಸರ್ವಶಕ್ತ ಹಸ್ತಗಳಿಂದ ವಿಶ್ವದ ಪ್ರಥಮ ಕಂಬಳಿಯನ್ನು ನೆಯ್ದು ಪ್ರಥಮ ಕಂಬಳಿಕಾರನಾದನು. ಅಲ್ಲದೆ ವಿಷ್ಣು ಹಾಗೂ ಬ್ರಹ್ಮರು ಕೂಡ ನಂತರದ ಕಂಬಳಿಕಾರರಾದರು. ಹಿಮಪಾತದ ತಾಪದಿಂದ ರಕ್ಷಣೆ ಪಡೆಯುವುದಕ್ಕಾಗಿ ತಾವು ಧರಿಸಲು ಸಿದ್ಧಗೊಳಿಸುತ್ತಿದ್ದ ಕಂಬಳಿಗಳನ್ನು ಕಂಡು ಸರ್ವದೇವತೆಗಳೆಲ್ಲರೂ ಸಂತೋಷಭರಿತವಾಗಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳುವವರಾದರು. ನಂತರದಲ್ಲಿ ಕುರುಬರು ಇನ್ನುಳಿದ ಕಂಬಳಿಗಳನ್ನು ನೇಯ್ದರು.

ಆ ಮೇಲೆ ಕುರುಬರು ನಂದಿಯ ಸಹಾಯದಿಂದ ಕುರುಬ ನೆರಿಯಲ್ಲಿ ನೆಯ್ದ ಕಂಬಳಿಗಳನ್ನೆಲ್ಲ ಕೈಲಾಸಕ್ಕೆ ಸಾಗಿಸಿದರು. ಮಹಾದ್ವಾರದಲ್ಲಿ ಇವುಗಳನ್ನು ಬರಮಾಡಿಕೊಂಡು ಸಂಭ್ರಮದೊಂದಿಗೆ ಮೆರವಣಿಗೆ ಮಾಡುತ್ತ ಕೈಲಾಸದ ಮುಖ್ಯ ಮಂಟಪಕ್ಕೆ ತರಲಾಯಿತು.

ಉಪಸ್ಥಿತರಿದ್ದ ಎಲ್ಲ ದೇವತೆಗಳ ಸಮ್ಮುಖದಲ್ಲಿ ಕಂಬಳಿಯ ಪ್ರಥಮ ಗದ್ದುಗೆಯನ್ನು ಮಾಡಿ ಶಿವಶಕ್ತಿಯರು ಕಂಬಳಿಯ ಮೇಲೆ ಆಸೀನರಾದ ಪ್ರಥಮರಾದರು. ಈ ರೀತಿಯಾಗಿ ಕುರುಬ ಕಂಬಳಿಯು ಪರಮರೂ, ಪಾವನರೂ ಆದ ಶಿವಶಕ್ತಿಯರಿಗೆ ಆಸನವಾಗಿ ಪವಿತ್ರ ಕಂಬಳಿಯಾಯಿತು. ನಂತರದಲ್ಲಿ ವಿಷ್ಣು ಬ್ರಹ್ಮರೂ ಕೂಡ ಕಂಬಳಿಗಳನ್ನೇರಿ ಕುಳಿತು ಪವಿತ್ರಗೊಳಿಸಿದರು. ಆಮೇಲೆ ಅವೆಲ್ಲವುಗಳನ್ನು

ದೇವತೆಗಳಿಗೆ ವಿತರಿಸಲಾಯಿತು. ನಂತರ ಅವರು ಪ್ರಸಂಗಾನುಸಾರ ಈ ಮೈಲಿಗೆ ರಹಿತ ಪವಿತ್ರ ಕಂಬಳಿಗಳನ್ನು ಹೊದ್ದು ಶೀತಭಾದೆಯಿಂದ ಮುಕ್ತರಾಗಹತ್ತಿದರು. ಹೀಗೆ ಕುರುಬ ಕಂಬಳಿಯು ದೇವ ಕಂಬಳಿಯಾಯಿತು.

ಕಂಬಳಿ ಜೀವಂತ ಪೀಠ. ಹುಲಿ, ಜಿಂಕೆ ಚರ್ಮಗಳ ಪೀಠ ಸತ್ತ ಪೀಠ, ಸತ್ಯಸಂದ ಶಾಂತಿ ಪ್ರಾಣಿಯಾದ ಕುರಿಯು ಜೀವಂತ ಇರುವಾಗಲೇ ಅದರಿಂದ ಉಣ್ಣೆ ಪಡೆದು ಕಂಬಳಿ ತಯಾರಿಸುವುದರಿಂದ ಇದು ಜೀವಂತ ಪೀಠವಾಗುವುದು. ಹಿಂಸಾ ಪ್ರಾಣಿಯಾದ ಹುಲಿಯ ಮರಣದ ನಂತರ ಅದರ ಚರ್ಮ ಸುಲಿಯುವುದರಿಂದ ಅದು ಸತ್ತ ಪೀಠವಾಗುವುದು. ಹಾಗಂತಲೇ ಕಂಬಳಿ ಪೀಠಕ್ಕೆ ಮಹತ್ವವಿರುವುದು. ಎಲ್ಲ ಶುಭ ಕಾರ್ಯಗಳು ಕಂಬಳಿ ಪೀಠದ ಮೇಲೆಯೇ ಜರುಗುವವು.

ಇದಕ್ಕೆ ಮೈಲಿಗೆ ಇಲ್ಲ. ಇದನ್ನು ಪವಿತ್ರವೆಂದು ಗ್ರಹಿಸಲಾಗಿದೆ. ಆದುದರಿಂದಲೇ ಸಾಧನೆಗೈದವರಿಗೆ ಕಂಬಳಿ ಹೊಚ್ಚುವ ಸಂಪ್ರದಾಯ ಇಂದಿಗೂ ಮುಂದುವರೆದಿದೆ. ಆರಂಭದಿಂದಲೂ ಮಳೆ ಚಳಿಯಿಂದ ರಕ್ಷಣೆ ನೀಡಿದ ಕಂಬಳಿಯ ಪವಾಡಗಳು ಕುರುಬರ ಮೂಲದ ಕುರುಹಾಗಿ ಪ್ರೇರೆಪಿಸಿವೆ.

ಬಿಳಿ ಮತ್ತು ಕರಿ ಕಂಬಳಿಯ ವಿವಿಧ ಪ್ರಕಾರಗಳು ಮತ್ತು ಅವುಗಳಿಂದಾಗುವ ಪರಿಣಾಮವನ್ನು ಕಬ್ಬೂರಿನ ಶಿವಲಿಂಗ ಕುಂಬಾರನು ಹೇಳಿದುದ್ದರ ಕವಿತೆ ಹೀಗಿದೆ –

ಕಂಬಳಿ ಕೊಂಡಿಹೆನೋ ನಾನೊಂದು ।
ಕಂಬಳಿ ಕೊಂಡಿಹೆನೋ
ಕರಿಯ ಉಣ್ಣೆಯ ಕರಿಯ ಕಂಬಳಿ ।
ಬಿಳಿಯ ಉಣ್ಣೆಯ ಬಿಳಿಯ ಕಂಬಳಿ ।
ಕರಿ–ನರೆ ಬಣ್ಣದ ಕರಿ–ನರೆ ಕಂಬಳಿ ॥
ಮದ್ರಾಸ ಕಡೆಯ ಜಿಣುಗು ಕಂಬಳಿ ।
ಕುರುಬನು ಹೊರುವ ಉರುಟು ಕಂಬಳಿ ।
ದೇವರ ಗದ್ದುಗೆ ಮಾಡುವ ಕಂಬಳಿ ॥
ಚಳಿ–ಮಳಿಯಲ್ಲಿ ಹೊರಬರುವ ಕಂಬಳಿ ।
ಕಾಳು–ಕಡಿಗಳನ್ನು ಹಾಕುವ ಕಂಬಳಿ ।
ನೆಲದ ಮೆಲೆ ಹಾಸುವ ಕಂಬಳಿ ॥
ಕಣ್ಣು–ಕಣ್ಣೆನ ಹಂಡ ಬಂಡ ಕಂಬಳಿ ।
ಅಮೃತಸರದಲ್ಲಿ ಹುಟ್ಟಿದ ಕಂಬಳಿ ।
ರಾಜರು ಹೊದೆಯುವ ರತ್ನ ಕಂಬಳಿ ॥

ಬಡವರ ಬಾಳನು ನೂಕುವ ಕಂಬಳಿ ।
ಹಳೆಯದಾದರೂ ದುಡಿಯುವ ಕಂಬಳಿ ।
ಮಡಿಯ ಮೈಲಿಗೆ ಇಲ್ಲದ ಕಂಬಳಿ ॥
ಬಾಗಲಕೋಟೆಯ ಬೆಲೆಯ ಕಂಬಳಿ ।
ಕಡಪಟ್ಟಿಯ ತಾಳಿಕೆ ಕಂಬಳಿ ।
ನೆಹರುಗ ಜಾಕಿಟ ಆದ ಕಂಬಳಿ ॥
ಗುರುವಿನ ಗದ್ದುಗೆಗೆ ಮೀಸಲಾದ ಕಂಬಳಿ ।
ರೈತನು ರಾಶಿ ಮಾಡುವ ಕಂಬಳಿ ।
ಯೋಗಿ ಒಡೆಯಗೆ ಸಲ್ಲುವ ಕಂಬಳಿ ॥

**ಅಲಗ ಆಟ (ಅಲಗ ಹಾಯುವುದು) :**

ಅಲಗವೆಂದರೆ ಹತಿಯಾರ ಅಥವಾ ಖಡ್ಗವೆನ್ನುತ್ತಾರೆ. ಕೆಲವೊಂದು ಜಾತ್ರೆಗಳಲ್ಲಿ ಹಾಲುಮತದ ಪೂಜಾರಿಗಳು ಮೈದುಂಬಿದಾಗ ಖಡ್ಗದಿಂದ ಹೊಟ್ಟೆಗೆ, ಬೆನ್ನಿಗೆ, ನಾಲಿಗಿಗೆ, ಮೂರು ಸಾರಿ ಬಡಿದುಕೊಳ್ಳುವ ಆಟವೇ 'ಅಲಗಿನ ಆಟ' ಅಥವಾ ಅಲಗು ಹಾಯುವುದು ಎನ್ನುತ್ತಾರೆ.

**ಅಲಗಿನ ಆಟ ಆಡುವ ಹಿನ್ನೆಲೆ ಹೀಗಿದೆ :**

ಹಿಂದೊಮ್ಮೆ ಕೈಲಾಸದಲ್ಲಿ ಅಮೋಘಸಿದ್ಧನು ಪಾರ್ವತಿ ಪರಮೇಶ್ವರರ ಸೇವೆಯನ್ನು ಮಾಡುತ್ತಿದ್ದನು. ಏಳು ಯುಗಗಳ ಕಾಲ ಸೇವೆ ಮಾಡಿ ಅವನಲ್ಲಿ ನನ್ನಂಥ ಶಿಷ್ಯನೇ ಯಾರೂ ಇಲ್ಲವೆಂದು ಅವನಿಗೆ ಅಹಂಕಾರ ಬಂದಿತು. ಅಷ್ಟರಲ್ಲಿ ಭೂಲೋಕದಲ್ಲಿ ವೀರ ಮಾಳಿಂಗರಾಯ ಗುರು ಬೀರಣ್ಣ ನ ಸೇವೆ ಮಾಡುತ್ತಿದ್ದ. ಈಗಿನ ಸಿಂದಗಿ ತಾಲ್ಲೂಕು ಸಿರಡೋಣದಲ್ಲಿ ಬಾರಿಸುವ ಡೊಳ್ಳು, ತಾಳಿನ ನಾದ ಕೈಲಾಸಕ್ಕೆ ಢಣಢಣ ಎಂದು ಕೇಳಿಸುತಿತ್ತು. ಧೂಪದ ಸುವಾಸನೆ ಇವು ಪಾರ್ವತಿಗೆ ಗೊತ್ತಾದಾಗ ಪತಿದೇವನಿಗೆ ಭೂಲೋಕಕ್ಕೆ ಹೋಗಿ ಶಿಷ್ಯನನ್ನು ನೋಡಿ ಬರುವನು ಎಂದು ಶಿವ–ಪಾರ್ವತಿ ಮಾಳಪ್ಪನನ್ನು ಪರೀಕ್ಷಿಸಲು ಭೂಲೋಕಕ್ಕೆ ಬರುತ್ತಾರೆ.

ಶಿವ–ಪಾರ್ವತಿ, ತಮ್ಮ ವೇಷ ಬದಲಿಸಿಕೊಂಡು ಗೊತ್ತಾಗದ ರೀತಿಯಿಂದ ಮುಪ್ಪಾನ ಮುದುಕ ಹಾಗೂ ಪಾರ್ವತಿ ಮುದುಕಿಯ ವೇಷ ಧರಿಸಿಕೊಂಡು ಸಿರಡೋಣ ಗ್ರಾಮದ ಕಾತಾರ ಕಂಟಿಯ ಬಳಿ ಕುಳಿತಿದ್ದಾರೆ. ಪರಮಾತ್ಮನ ರೂಪ ನೋಡಿದರೆ, ಮೈಯಲ್ಲಿ(ದೇಹದಿಂದ) ಕೀವು ರಕ್ತದ ರಾಡಿ ಸೋರುತಿತ್ತು. ಪಾರ್ವತಿ ಪತಿಯ ಸೇವೆ ಮಾಡುತ್ತಿದ್ದಳು. ತ್ರಿಕಾಲಜ್ಞಾನಿ ಮಾಳಿಂಗರಾಯನಿಗಿದು ಗೊತ್ತಾಗುತ್ತದೆ.

ಮಾಳಪ್ಪ ಧೂಪಾರ್ತಿ ತೆಗೆದುಕೊಂಡು ಅವರಿದ್ದಲ್ಲಿಗೆ ಹೋಗುತ್ತಾನೆ. ಅವರ ರೂಪ ನೋಡಿ ನನ್ನ ಗುರು ಬಂದಿದ್ದಾನೆ ಎಂದು ತಿಳಿದು ದೇಹದಿಂದ ಸೋರುವ ಕೀವ ರಕ್ತವನ್ನು ನೋಡುತ್ತಾನೆ. ಪಾರ್ವತಿ ಗಾಳಿ ಬೀಸುತ್ತಿರುತ್ತಾಳೆ. ಮಾಳಿಂಗರಾಯ ಇದನ್ನು ನೋಡಿ ಪರಮಾತ್ಮನನ್ನು ಅಪ್ಪಿಕೊಂಡು ಕೀವು ರಕ್ತವನ್ನು ಪಂಚಾಮೃತ ಮಾಡಿ ನಾಲಿಗೆಯಿಂದ ಕುಡಿದು ಬಿಡುತ್ತಾನೆ.

ಪಾರ್ವತಿ ಮಾಳಿಂಗರಾಯನಿಗೆ ಇಷ್ಟು ಮಾಡಿದರೆ ಆಗದು ನನಗೆ ಅಲಗಿನ ಆಟ ಆಡಿ ತೋರಿಸಬೇಕು ಎಂದಳು. ಮಾಳಿಂಗರಾಯ ಗುರು ಬೀರಣ್ಣನ (ಬೀರಪ್ಪನ) ಆಶೀರ್ವಾದ ಹಾಗೂ ನಿಮ್ಮ ಆಶೀರ್ವಾದದಿಂದ ಅಲಗಿನ ಆಟ ಆಡುತ್ತೇನೆಂದು ಎರಡು ಕೈಗಳಲ್ಲಿ ಅಲಗ (ಕತ್ತಿ) ಹಿಡಿದುಕೊಂಡು ಹೊಟ್ಟೆಗೆ ಬಡಿದುಕೊಳ್ಳುತ್ತಾನೆ. ಹೊಟ್ಟೆಯಲ್ಲಿನ ಕರುಳು ಹೊರಗೆ ಬಂದು ರಕ್ತದ ಕಾಲುವೆ ಹರಿದಂತೆ ರಕ್ತ ಹರಿಯುತ್ತದೆ. ಆಗ ಪಾರ್ವತಿ–ಪರಮೇಶ್ವರರ ನಿಜವಾದ ಭಕ್ತ ಮಾಳಿಂಗರಾಯನೇ ಶ್ರೇಷ್ಠ. ಶಿವ ಪ್ರತ್ಯಕ್ಷನಾಗಿ ನಿನಗೆ ಏನು ವರಬೇಕು ಬೇಡು ಎಂದಾಗ ಮಾಳಿಂಗರಾಯ ಬಡವರಿಗೆ ಭಾಗ್ಯ; ವರ್ಷಕ್ಕೊಮ್ಮೆ ನನಗೆ ನಿಮ್ಮ ದರ್ಶನ ಭಾಗ್ಯಬೇಕೆಂದು ಕೇಳುತ್ತಾನೆ. ಅಂದಿನಿಂದ ಇಂದಿನ ವರೆಗೆ ದೀಪಾವಳಿ ಅಮಾವಾಸ್ಯೆಗೆ ಕೈಲಾಸದಿಂದ ಪಾರ್ವತಿ–ಪರಮೇಶ್ವರ ಬಂದು ಮುಂಡಾಸು ಸುತ್ತುತ್ತಾರೆ. ಇದು ವಾಡಿಕೆಯಾಗಿದೆ.

ಅಲಗಿನ ಆಟ ನಡೆಯುವ ಮುಖ್ಯ ಸ್ಥಳಗಳು ಕಡೋಳಿ ಇಟರಾಯನ ಜಾತ್ರೆ(ಮಹಾರಾಷ್ಟ್ರ) ಹುಲಜಂತಿ ಮಾಳಿಂಗರಾಯ, ಅಲಕನೂರಿನ ಕರೆಸಿದ್ಧೇಶ್ವರ, ಕಂಕಣವಾಡಿಯ ಹಾಲಸಿದ್ಧೇಶ್ವರ, ಹಾರೂಗೇರಿಯ ಕರೆಸಿದ್ಧೇಶ್ವರ ಜಾತ್ರೆಯಲ್ಲಿ, ಹಿಡಕಲ್ ಬೀರಪ್ಪನ ಜಾತ್ರೆಯಲ್ಲಿ, ಮುಂಡಗನೂರ ಮುರುಸಿದ್ಧನ ಜಾತ್ರೆಯಲ್ಲಿ ಮಾಳಿಂಗರಾಯ ಮಾಡಿದ ಪವಾಡವು ಇಂದಿಗೂ ನಡೆದಿದೆ.

ಅಲಗ ಆಡುವುದೆಂದರೆ ಖಡ್ಗದಿಂದ ಹೊಟ್ಟೆಗೆ, ನಾಲಿಗೆಗೆ ಬಡಿದುಕೊಳ್ಳುತ್ತಾರೆ. ಅದನ್ನು ನೋಡಿದರೆ ರೋಮಾಂಚನಕಾರಿ ಎನಿಸುತ್ತದೆ. ಬಡಿದುಕೊಳ್ಳುವ ಕತ್ತಿ ನೋಡಿದರೆ ಹೆದರಿಕೆ ಬರುತ್ತದೆ. ಡೊಳ್ಳಿನ ನಾದಕ್ಕೆ ಜಿಗಿ ಜಿಗಿದು ಜೋರಾಗಿ ಬಡಿದುಕೊಳ್ಳುತ್ತಾರೆ. ಇದು ಮಾಳಿಂಗರಾಯ ಹಾಗೂ ಬೀರಪ್ಪನ ವರವಿದ್ದವರಿಗೆ ಮಾತ್ರ ಸಾಧ್ಯ. ಖಡ್ಗ ಬಡಿದುಕೊಂಡಾಗ ಭಂಡಾರ ಎರಚುವರು ಇದು ರೂಢಿಯಿಂದ ಬಂದ ಸಂಪ್ರದಾಯ. ಇದು ಈಗಿನ ಜನರಿಗೆ ದೇವರು ಇದ್ದಾನೆ ಎಂಬುದಕ್ಕೆ ಸಾಕ್ಷಿಯಾಗಿ ನಿಂತಿರುವ ಆಟವಾಗಿದೆ.

**ಭಂಡಾರದ ವೈಶಿಷ್ಟ್ಯ :**

ಕುರುಬರ ಪರ್ವಚೇತನಾದಿಗಳು. ಇವರು ಸೂರ್ಯ, ಚಂದ್ರ, ಹಾಲು–ನೀರು, ಭಂಡಾರ, ದನ, ಗಿಡ–ಮರ, ಇತ್ಯಾದಿಗಳನ್ನು ಭಕ್ತಿಯಿಂದ ಪೂಜಿಸುವರು. ಇವು ಮಾನವನ ಬದುಕಿಗೆ ಹಾಗೂ ಬೆಳವಣಿಗೆಗೆ ಸಂಜೀವಿನಿಯಾಗಿರುವವು. ಅರಷಿಣ(ಭಂಡಾರ)ಗಳಲ್ಲಿ ಔಷಧಿಯ ಗುಣವಿರುವುದನ್ನು ನಮ್ಮ ಪೂರ್ವಜರು ಬಹು ಹಿಂದೆಯೇ ಪತ್ತೆ ಹಚ್ಚಿ ಇವುಗಳಿಗೆ ದೈವದ ಸ್ವರೂಪ

ನೀಡಿ ಪೂಜಿಸಲಾರಂಭಿಸಿದರು. ಭಂಡಾರಗಳ ಪ್ರತೀಕವೇ ಎಲ್ಲಮ್ಮ, ಮಾರಮ್ಮ, ಜಂಬಾಲಮ್ಮ, ದುರ್ಗಮ್ಮ, ಲಕ್ಷ್ಮೀ, ಮುಂತಾದ ಸ್ತ್ರೀ ದೈವಗಳನ್ನು ಹಾಗೂ ಮೈಲಾರ ಖಂಡೋಬಾ, ಬೀರಪ್ಪ, ಅಮೋಘಸಿದ್ಧ, ಮಾಳಿಂಗರಾಯ, ಇತ್ಯಾದಿ ಪುರುಷ ದೈವಗಳನ್ನು ಹುಟ್ಟು ಹಾಕಿದರು. ಇವು ಅವರಿಗೆ ರಕ್ಷಾ ಕವಚಗಳಾದವು.

ಈ ಜ್ಞಾನ ಉಳಿಸಿ ಬೆಳೆಸಲೆಂದೇ ಭಂಡಾರಕ್ಕೆ ಸಂಬಂಧಿಸಿದಂತೆ ಆಚರಣೆಗಳನ್ನು ಸೃಷ್ಟಿಸಿದರು. ಇಂದಿಗೂ ಮೈಲಾರ, ಬೀರಪ್ಪ ಇತ್ಯಾದಿ ದೈವಗಳನ್ನು ಮತ್ತು ಎಲ್ಲಮ್ಮ, ಜಂಬಲಮ್ಮ, ಸುಂಕಮ್ಮ, ಮಾರಮ್ಮ ಇತ್ಯಾದಿ ಸ್ತ್ರೀ ದೈವಗಳನ್ನು ಭಂಡಾರದ ಪ್ರತೀಕವೇ ಆಗಿ ಆರಾಧಿಸುವುದನ್ನು ನೋಡುತ್ತೇವೆ. ಎಲ್ಲಮ್ಮ, ಮೈಲಾರ ಪರಿವಾರದ ದೈವವೆಂದು ಹೇಳಲಾಗುವುದು.

ಭಂಡಾರ ಔಷಧಿಯ ಪರಿವಾರಕ್ಕೆ ಸೇರಿದವಾಗಿವೆ. ಔಷಧೀಯ ಗುಣ ಮೂಲದ ದೈವಗಳೆಲ್ಲವೂ ಒಂದೇ ಪರಿವಾರದ ದೈವಗಳಾಗುವವು. ಮೈಲಾರ ಮಲೆಯ ದೈವ, ಎಲ್ಲರ ಅಮ್ಮ ಎಲ್ಲಮ್ಮ. ಇವರ ಪೂಜೆ ಬೇವು ಭಂಡಾರಗಳು ಅಗತ್ಯವಾಗಿರಬೇಕು.

ಇಂದು ಈ ದೈವಗಳನ್ನು ಸಂಸ್ಕೃತೀಕರಣಗೊಳಿಸಿ ಇವುಗಳ ಕೈಯಲ್ಲಿ ಬೇವು ಭಂಡಾರದ ಬದಲಾಗಿ ಖಡ್ಗಗಳನ್ನು ಇರಿಸಿದ್ದೇವೆ. ಮೂಲ ರೂಪ ವಿರೂಪಗೊಳಿಸುತ್ತಲಿವೆ. ಇವರ ಪುರಾಣ ಸೃಷ್ಟಿಸಿದ್ದೇ ಇವೆ. ಇವರನ್ನು ಸಾಂಸ್ಕೃತಿಕ ವೀರರನ್ನಾಗಿಸಿದ್ದೇವೆ.

ಕುರುಬರು ಭಂಡಾರಕ್ಕೆ ಕೊಡುವ ಮಹತ್ವ ಈ ದೈವಾರಾಧಾನೆಗಳಿಂದ ವ್ಯಕ್ತವಾಗುತ್ತದೆ. ಕುರುಬರು ಭಂಡಾರ ಪ್ರಿಯರು. ಇದರಲ್ಲಿ ದೈವೀಶಕ್ತಿಯಿರುವುದೆಂದು ನಂಬಿ ಅದನ್ನು ನಿತ್ಯ ಹಣೆಗೆ ಹಚ್ಚಿಕೊಳ್ಳುವರು. ಈ ಜ್ಞಾನವನ್ನು ಉಳಿಸಿ ಬೆಳೆಸಲೆಂದು ಈರಕಾರ, ಗೊರವ, ವಗ್ಗಯ್ಯ, ವಾರು, ಜೋಗತಿಯರು ಸಾಂಪ್ರದಾಯಿಕವಾಗಿ ಈ ದೈವಗಳ ಒಕ್ಕಲಾಗಿ ದುಡಿಯುತ್ತಿದ್ದಾರೆ.

**ಡೊಳ್ಳುವಾದ್ಯದ ವಿಶೇಷತೆ :**

ಡೊಳ್ಳು ಜನಪದ ವಾದ್ಯಗಳಲ್ಲಿಯೇ ಹಿರಿದಾದ ಕುರುಬರ ವಿಶೇಷ ವಾದ್ಯ. ಅದರ ಪ್ರಾರಂಭಿಕ ಹಿನ್ನೆಲೆಯಾಗಿ ಗುಡ್ಡಗಾಡಿನಲ್ಲಿ ಕುರಿ ಕಾಯುವಾಗ ಅವರಿಗೆ ಈ ವಾದ್ಯದ ಅವಶ್ಯಕತೆಯುಂಟಾಗಿರಬೇಕೆಂಬುದು ನಿಜವಾದರೂ ಡೊಳ್ಳು ಆತನ ಕೊರಳಲ್ಲಿ ಸದಾ ತೂಗಾಡುತ್ತಿರಬೇಕೆಂಬುದು ಡಾ. ಸುಂಕಾಪುರ ಅವರ ವಿಚಾರ ಅಸಂಗತವೆನಿಸುತ್ತದೆ.

ಇಂದು ಕುರುಬರ ಸಂಸ್ಕೃತಿಯಲ್ಲಿ ಡೊಳ್ಳು ಪೂಜಿಸಿಕೊಳ್ಳುವ ವಾದ್ಯವಾಗಿದೆ. ಅದು ಪೂಜೆಗೆ ಬಾರಿಸುವ ವಾದ್ಯವೂ ಹೌದು. ಡೊಳ್ಳು ಅಷ್ಟ ಓಲಗದಲ್ಲಿ ಶ್ರೇಷ್ಠವಾದುದೆಂದೂ ಸತ್ಕರ್ಮಗಳಲ್ಲಿ ಇದನ್ನು ಬಡಿಯಬೇಕೆಂದೂ ರೂಢಿ ಹೇಳುತ್ತದೆ. ಇಂದು ಅದು ಪ್ರದರ್ಶನ ಕಲೆಯಾಗಿಯೂ

ಭಾರತದಲ್ಲಿ ಪ್ರಚಲಿತವಿದೆ. ಡೊಳ್ಳಾಸುರನೆಂಬ ರಾಕ್ಷಸನ ಸಂಹಾರದ ಕಾರಣಕ್ಕಾಗಿ ದೇವರನ್ನು ಕರೆಯುವುದಕ್ಕಾಗಿ ಡೊಳ್ಳು ಬಡಿಯುವ ಪರಿಪಾಠ ಬಂದಿತೆಂಬುದೂ ಈ ಜನಾಂಗದ ನಂಬುಗೆಯಾಗಿದೆ.

ಇನ್ನು ಡೊಳ್ಳಿನ ಹಾಡುಗಳು ಮುಖ್ಯವಾಗಿ ಆರಾಧಾನೆಯ ಅಂಗವಾಗಿ ಬೀರದೇವರ ಗುಡಿಯ ಮುಂದೆ ಜಾತ್ರೆ ರಥೋತ್ಸವಗಳಲ್ಲಿ ಹಾಡುವಂತಹವು. ಡಾ. ಶ್ರೀರಾಮ ಇಟ್ಟಣ್ಣವರ ಅವರ "ಡೊಳ್ಳಿನ ಹಾಡುಗಳು ಸಂದರ್ಭದ ದೃಷ್ಟಿಯಿಂದ ಎರಡು ರೀತಿಯಾಗಿ ಹಾಡಲ್ಪಡುತ್ತವೆ. ಮೊದಲನೆಯದು ಊರಾಡುವ ಸಂದರ್ಭದಲ್ಲಿ ಹಾಡುವ ಹರಕೆಯ ಹಾಡು ಸಂಪ್ರದಾಯವಾಗಿ ಬೆಳೆದು ಬಂದದ್ದು.

ಎರಡನೆಯದು ದಿಮ್ಮಿಟ್ಟು ಹಾಡುವ ಗೋಷ್ಠಿ ವಿಧಾನ ದೇವರ ಸೇವೆಯಾಗಿ ಬಂದದ್ದು. ಈ ಎರಡೂ ಸಂದರ್ಭದಲ್ಲಿ ಪ್ರತಿಯೊಂದು ಹಾಡೂ .

**'ಸ್ವಾಮಿ ನಮ್ಮಯ್ ದೇವರ್**
**ಬಂದಾವ್ ಬನ್ನಿರೇ'**

ಎಂಬ ಪಲ್ಲವಿಯೊಂದಿಗೆ ಪ್ರಾರಂಭವಾಗುತ್ತವೆ ಎಂದು ಗುರುತಿಸಿದ್ದಾರೆ.

ಹೀಗೆ ಡೊಳ್ಳಿನ ಹಾಡುಗಳ ಬಗ್ಗೆ ಬರೆಯುತ್ತಾ ಜಾನಪದ ವಿದ್ವಾಂಸರಾದ ಶ್ರೀ ಬಿ.ಬಿ.ಹೆಂಡಿಯವರು ಡೊಳ್ಳಿನ ಹಾಡುಗಳು ಧಾಟಿಯಲ್ಲಿ ಬಹುಮಟ್ಟಿಗೆ ಏಕತನದವು. ಸ್ವರದ ಏರಿಳಿತದಲ್ಲಾಗಲಿ, ತಾಳದಲ್ಲಾಗಲಿ, ಒಂದೇ ತೆರನಾಗಿ ಸಾಗುವಂತಹವು.

ಮನರಂಜನೆಗಿಂತ ಮತಶ್ರದ್ಧೆಯೇ ಈ ಹಾಡುಗಳ ಪ್ರಧಾನ ಪ್ರೇರೇಪಣೆಯಾಗಿದ್ದುದೂ ಕುರುಬ ಜನಾಂಗದ ಹಟ್ಟಿಕಾರರಾಗಿ ವೈವಿಧ್ಯಪೂರ್ಣವಾದ ಇತರ ಜನಪದದೊಡನೆ ತಮ್ಮ ನಿತ್ಯ ಜೀವನದಲ್ಲಿ ಅನ್ಯೋನ್ಯ ಸಂಬಂಧ ಬೆಳೆಸಿಕೊಳ್ಳದೆ ಪ್ರತ್ಯೇಕವಾಗಿ ಬೆಳೆಸಿಕೊಂಡು ಬಂದುದೂ ಇದಕ್ಕೆ ಕಾರಣವಾಗಿರಬಹುದು.

ವಸ್ತುವಿನ ದೃಷ್ಟಿಯಿಂದ ಡೊಳ್ಳಿನ ಹಾಡುಗಳಲ್ಲಿ ಕಥಾ ರೂಪದತ್ತ ಒಲವು ಕಾಣುತ್ತದೆ. ಮೊದಲು ಕೇವಲ 'ಹಾಲುಮತ' ಸಂಪ್ರದಾಯವನ್ನು ಅನುಸರಿಸುತ್ತಿದ್ದ ಹಾಡುಗಳು ನಾಗರಿಕತೆಯ ಪ್ರಭಾವದಿಂದಾಗಿ ಇತರ ವಸ್ತು ವಿಷಯಗಳನ್ನು ಬಳಸಿ ಡೊಳ್ಳಿನ ಹಾಡುಗಳಿಗೆ ವೈವಿಧ್ಯತೆಗಳನ್ನು ತಂದದ್ದನ್ನು ಕಾಣುತ್ತೇವೆ.

ವೈದಿಕ ಸಂಪ್ರದಾಯದ ಭೃಂಗಿ, ಮಾರ್ಕಂಡೇಯ, ಜಮದಗ್ನಿ, ಶನಿದೇವರು ಮುಂತಾದವರ ಚರಿತ್ರೆಯ ಜೊತೆಗೆ ಕೌರವ ಪಾಂಡವರ ಚರಿತ್ರೆ, ಶಿವಶರಣರ ಚರಿತ್ರೆ, ಮುಂತಾದ ವಿಷಯದ ಹಾಡುಗಳೂ ಇದರಿಂದಾಗಿ ಹುಟ್ಟಿಕೊಂಡಿರಬೇಕು. ಇತ್ತಿತ್ತಲಾಗಿ ಹರದೇಶಿ, ನಾಗೇಶಿ, ವಾದದ ಚಾತುರ್ಯವನ್ನು ಬಳಸಿ ಹಾಡು ಕಟ್ಟುವ ಪ್ರಯತ್ನವೂ ತೋರುತ್ತದೆ.

**ಹಾಲುಗಂಬ :**

ಮದುವೆಯ ಎರಡನೆಯ ದಿನ ಹೆಣ್ಣು-ಗಂಡಿನ ಮನೆಯಲ್ಲಿ ಪ್ರತ್ಯೇಕವಾಗಿ ಅರಿಷಿಣ ಹಚ್ಚುತ್ತಾರೆ. ಅಂದು ಅರಿಷಿಣ ಕಡುಬು ಮಾಡುತ್ತಾರೆ. ಮೂರನೆಯ ದಿನ ಹಂದರ ಹಾಕುತ್ತಾರೆ. ಈ ಕ್ರಿಯೆ ಪ್ರಾದೇಶಿಕತೆಯನ್ನು ಅವಲಂಬಿಸಿ ಭಿನ್ನವಾಗಿ ಕಾಣುತ್ತದೆ. ಶಿವಾನಂದ ಗುಂಡಣ್ಣನವರು ಗುರುತಿಸುವಂತೆ ಮೂರು ಸಾಲಿನಲ್ಲಿ ಬರುವಂತೆ ಹನ್ನೆರಡು ಕಂಬಗಳನ್ನು ನಿಲ್ಲಿಸಿ ಮೇಲೆ ಹಸಿರು ಎಲೆ ಹೊದಿಸಿ ಹಂದರ ಮಾಡುತ್ತಾರೆ. ಹನ್ನೆರಡು ಕಂಬಗಳಲ್ಲಿ ಕಳ್ಳಿ, ಮುತ್ತುಗ, ಹಾಗೂ ನೇರಿಲ, ಮೂರು ಕಂಬಗಳನ್ನು ಸಂತತಿ ಮುಂದುವರೆಯುವುದಕ್ಕಾಗಿ ನಡೆಸಬೇಕೆಂದು ಹೇಳಲಾಗಿದೆ.

"ಕಳ್ಳಿಯಲ್ಲಿ ಹಾಲಿನಂತೆ ದ್ರವವಿರುವದರಿಂದ ಇದಕ್ಕೆ 'ಹಾಲುಗಂಬ' ವೆಂದು ಹೇಳಲಾಗಿದೆ. ಇದನ್ನು ಮದುವೆಯಾಗುವ ಗಂಡಿನ ಸೋದರ ಮಾವ ಕಡಿಯಬೇಕೆಂಬ ನಿಯಮವಿದೆ. ತೆಂಗಿನ ಕಾಯಿ, ಊದಿನ ಕಡ್ಡಿ, ಇತರೆ ಪೂಜಾ ಸಾಮಾನುಗಳೊಂದಿಗೆ ಗಿಡವಿರುವ ಜಾಗದಲ್ಲಿ ಹೋಗಿ ಪೂಜಿಸಿ ನಂತರ ಗಿಡ ಕಡಿದುಕೊಂಡು ವಾದ್ಯ ವೈಭವಗಳೊಂದಿಗೆ ಬೀರ ದೇವರ ಗುಡಿಯ ಮುಂದೆ ಹಾಯ್ದು ಹಂದರಕ್ಕೆ ಬಂದು ಹಾಲು, ಮೊಸರು, ತುಪ್ಪ ಹಾಗೂ ಮುತ್ತು, ಹವಳ, ಬಂಗಾರದ ಚೂರುಗಳನ್ನು ಕುಣಿಯಲ್ಲಿಟ್ಟು ಹೂಳಿದ ನಂತರ ನೂಲಿನ ಕಂಕಣ, ಒಂಭತ್ತು ತರದ ಧಾನ್ಯಗಳನ್ನು ಒಳಗೊಂಡ ಕೆಂಪು ಬಣ್ಣದ ಅರಿವೆಯ ಗಂಟನ್ನು ಕಂಬಕ್ಕೆ ಕಟ್ಟಲಾಗುತ್ತದೆ. ಮುತ್ತೈದೆಯರು ಆ ಕಂಬಕ್ಕೆ ಆರತಿ ಮಾಡುತ್ತಾರೆ. ಈ ರೀತಿಯಾಗಿ ಹಾಲುಮತದಲ್ಲಿ ಹಾಲುಗಂಬದಂಥ ಆಚರಣೆಗಳು ಬರುತ್ತವೆ.

**ಕರಿ ಕಟ್ಟುವುದು :**

ಹಾಲುಮತ ಧರ್ಮದಲ್ಲಿ ಹಲವಾರು ಆಚರಣೆಗಳು ಪ್ರಾಚೀನ ಕಾಲದಿಂದಲೂ ಕಂಡು ಬಂದಿವೆ. ಅನೇಕ ಆಚರಣೆಗಳು ಹಾಲು ಮತಧರ್ಮದಲ್ಲಿ ನೆರವೇರುತ್ತಾ ಬಂದಿವೆ. ಅದರಲ್ಲಿ ಹಾಲುಮತ ದೇವರ ಜಾತ್ರೆಗಳಲ್ಲಿ ಕರಿಕಟ್ಟುವ ಆಚರಣೆಯೂ ಕೂಡ ಒಂದು ವಿಶಿಷ್ಟವಾದ ಆಚರಣೆಯಾಗಿದೆ.

ಹಾಲುಮತ ದೇವತೆಗಳಲ್ಲಿ ಪ್ರತಿಯೊಂದು ದೇವರ ಜಾತ್ರೆಯೂ ಅತೀ ವಿಜೃಂಭಣೆಯಿಂದ ನಡೆಯುತ್ತದೆ. ಕಿಚ್ಚು ಹಾಯುವುದು, ನುಡಿ ಹೇಳುವುದು, ಮುಂತಾದ ಆಚರಣೆಗಳು ಬರುತ್ತವೆ. ಅದರಲ್ಲಿ ಕರಿಕಟ್ಟುವುದೂ ಕೂಡ ಒಂದು ವಿಶಿಷ್ಟ ಆಚರಣೆಯಾಗಿದೆ.

ಜಾತ್ರೆ ನಿಶ್ಚಿತವಾದ ಜಾತ್ರೆಯ ಕೊನೆಯ ದಿನದಿಂದ ಮೊದಲು ಐದು ದಿನ ಮುಂಚಿತವಾಗಿ ಕರಿಕಟ್ಟುವ ಆಚರಣೆಯನ್ನು ಆಚರಿಸಲಾಗುವುದು. ಕರಿಕಟ್ಟುವುದೇಂದರೆ ದೇವರ ಜಗುಲಿಯ ಮೇಲೆ ಕರಿದ ಪದಾರ್ಥಗಳಾದ ಕರಚಿಕಾಯಿ, ತರಗ, ಹಪ್ಪಳ ಮುಂತಾದ ಆಹಾರ ಪದಾರ್ಥಗಳನ್ನು ದೇವರ ಜಗುಲಿಯ ಮೇಲೆ ಕಟ್ಟುವುದಾಗಿದೆ.

**ಕರಿ ಹರಿಯುವುದು :**

ಹಾಲುಮತ ದೇವರುಗಳಲ್ಲಿ ಜಾತ್ರೆಯ ಕೊನೆಯ ದಿನ ಕಟ್ಟಿದಂತಹ ಕರಿಯನ್ನು ಐದು ದಿನಗಳ ನಂತರ ಹರಿಯುವುದು ಅದೊಂದು ವಿಶಿಷ್ಟ ಸಂಪ್ರದಾಯವಾಗಿದೆ. ದೇವರ ಜಾತ್ರೆಗಿಂತ ಐದು ದಿನಗಳ ನಂತರ ದೇವರ ಜಗುಲಿಯ ಮೇಲೆ ಕಟ್ಟಿದ ತರಗ, ಕರಚಿಕಾಯಿ, ಮುಂತಾದ ಕರಿದ ಪದಾರ್ಥಗಳನ್ನು ಜಾತ್ರೆಯ ಕೊನೆಯ ದಿನ ಕಟ್ಟಿದ ಕರಿಯನ್ನು ಹರಿದು ಜಾತ್ರೆಗೆ ಬಂದಂತಹ ಡೊಳ್ಳಿನ ಮೇಳದವರಿಗೆ, ಕೈಪಟ್ಟು ಬಾರಿಸುವವರಿಗೆ, ವಿವಿಧ ಮೇಳದವರಿಗೆ, ಭಕ್ತರಿಗೆ, ಕಟ್ಟಿದ ಅಹಾರ ಪದಾರ್ಥಗಳನ್ನು ಕೊಡುವುದಾಗಿದೆ.ಇದು ಜಾತ್ರೆಯ ಮುಕ್ತಾಯವನ್ನು ಸೂಚಿಸುವುದು.

# ಅಧ್ಯಾಯ -೫

# ಸಮಾರೋಪ

ರಾಯಬಾಗ ತಾಲೂಕಿನ ಹಾಲುಮತ ದೈವಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ ಜೊತೆಗೆ ವರ್ತಮಾನ ಆಚರಣೆಗೆ ಹೆಚ್ಚು ಒತ್ತು ಕೊಟ್ಟು ಅಧ್ಯಯನ ಮಾಡಲಾಗಿದೆ. ಈ ಹಾಲು ಮತದ ಸಂಪ್ರದಾಯ, ಆಚರಣೆ, ದೈವಗಳ ಪರಿಕಲ್ಪನೆಗಳನ್ನು ಪ್ರಾಸಂಗಿಕವಾಗಿ ಪರಿಚಯಿಸಲಾಯಿತು.

ಪ್ರತಿ ದೈವಗಳ ಬಗ್ಗೆ ಜನರಲ್ಲಿ, ಪುರಾಣಗಳಲ್ಲಿ ಬರುವ ಮಾಹಿತಿಯನ್ನು ದಾಖಲಿಸಿಕೊಂಡು ಅವುಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನದ ಒಟ್ಟಾರೆ ಫಲಿತಾಂಶಗಳನ್ನು ಈ ಕೆಳಗಿನಂತೆ ದಾಖಲಿಸಬಹುದು.

೧) ಹಾಲುಮತದ ದೈವಗಳು ಐತಿಹಾಸಿಕ ಮತ್ತು ಧಾರ್ಮಿಕವಾಗಿ ಬೃಹದಾಕಾರವಾಗಿ, ಬೆಳೆದು ನಿಂತಿವೆ. ಈ ದೈವಗಳ ಬಗ್ಗೆ ಮೂಲದಲ್ಲಿ ಒಂದೇ ಅಭಿಪ್ರಾಯವಿಲ್ಲದಿದ್ದರೂ ನಂಬಿಕೆ ಮತ್ತು ಆಚರಣೆಯಲ್ಲಿ ಯಾವ ಭೇದ ನಮಗೆ ಕಾಣಸಿಗದು.

೨) ಹಾಲುಮತ ಎನ್ನುವುದು ಕುರುಬ ಸಮಾಜದ ದೈವಗಳ ಸಂಕೀರ್ಣ ವ್ಯವಸ್ಥೆಯಾಗಿದ್ದು, ಮೂಲ ಶಿವಪಾರ್ವತಿಯಂತಹ ದೈವಗಳನ್ನು ಹೊಂದಿದ್ದರೂ ಕಾಲಕ್ರಮೇಣ ಅವುಗಳೊಂದಿಗೆ ದೈವೀ ಪುರುಷರು ಸೇರ್ಪಡೆಯಾಗಿ ಹಾಲುಮತದ ದೈವಗಳಾಗಿ ಮಾರ್ಪಟ್ಟಿದ್ದಾರೆ.

೩) ಹಾಲುಮತ ಆಚರಣೆ ಮತ್ತು ನಂಬಿಕೆಗಳು ಅತಿಯಾದ ಅಂಧಶ್ರದ್ಧೆ ಎನಿಸಿದರೂ ಅವುಗಳ ವೈಜ್ಞಾನಿಕ ದೃಷ್ಟಿಕೋನ ಕೆಲವು ಹೊಂದಿರುವುದನ್ನು ನಾವು ಕಾಣಬಹುದಾಗಿದೆ.

೪) "ಹಾಲುಮತ" ದವರು ಆಚರಣೆಯಲ್ಲಿ ತಂದಿರುವ ಹಾಡಿಕೆ ಮೇಳಗಳು ಕೇವಲ ಹಾಲುಮತಕ್ಕೆ ಸಂಬಂಧಿಸಿದಂತೆ ಅಲ್ಲದೇ ಪುರಾಣ ಪ್ರಶ್ನೆ ಮತ್ತು ಗಂಡು, ಹೆಣ್ಣು, ಹರ್ದೇಶಿ–ನಾಗೇಶಿ ಎಂದು ಬೇರೆ ಬೇರೆ ಸ್ವರೂಪದ ಹಾಡುಗಳನ್ನು ಹಾಡುವುದನ್ನು ಕಾಣುತ್ತೇವೆ.

೫) ಹಾಲುಮತದ ವಿವರ ಆಚರಣೆಗಳಲ್ಲಿ ತನ್ನದೇ ಆದ ಸಾಂಸ್ಕೃತಿಕ ಸ್ವರೂಪದಲ್ಲಿ ಬದಲಾವಣೆಗೆ ಒಳಗಾಗುತ್ತವೆ. ಈ ಬದಲಾವಣೆಯನ್ನು ಇಲ್ಲಿ ಗಮನಿಸಬಹುದಾಗಿದೆ.

೬) ಈ ಹಾಲುಮತ ಸಮಾಜದ ಹುಟ್ಟು ಬೆಳವಣಿಗೆಯ ಮೂಲ ಹುಡುಕಿದಲ್ಲಿ ಪವಿತ್ರ ಹಾಲುಮತ ಪುರಾಣದ ಅವಲೋಕನದಲ್ಲಿ ಕಂಡು ಬರುವುದು. ಕುರುಬರು ಮೂಲದಲ್ಲಿ ಶೈವರು; ತದನಂತರ ವೀರಶೈವರಾದುದು ತಿಳಿದು ಬರುತ್ತದೆ. ಪರಿಸರಕ್ಕೆ ಹೊಂದಿಕೊಂಡು ಬೆಳೆಯುವದು ಸಹಜ! ಅಂತಹ ವೈಷ್ಣವ ಪ್ರಗತಿಯ ವಿಜಯನಗರ ಅರಸರ ಕಾಲದಲ್ಲಿ ಆಗಿ ಹೋದ ಪೂಜ್ಯ ಕನಕದಾಸರು ಆ ದಾರಿಯನ್ನನುಸರಿಸಿ ಆತ್ಮ ಸಾಕ್ಷಾತ್ಕಾರ ಪಡೆದರು.

ಗಿರಿಯ ಶೃಂಗವೇರಲು ಬಳಸಿ ಬಂದ ದಾರಿ ಯಾವುದಾದರೇನು? 'ದೇವನೊಬ್ಬ ನಾಮ ಹಲವು'. ಅವನನ್ನು ಒಲಿಸುವ ಹಾದಿಗಳು ಅನೇಕ. ದಾಸ ಶ್ರೇಷ್ಠರ ಹೆಸರಿನಿಂದ ಕಾಗಿನೆಲೆ ಕನಕ ಸಂಸ್ಥಾನಮಠ ಈ ಸಮಾಜದ ದಿಕ್ಸೂಚಿಯಾಗಬಹುದು, ಬದುಕಿನ ಹಡಗು ಭವ ಸಾಗರದಲ್ಲಿ ಸಾಗಲು.

ಆಧುನಿಕ ಯುಗದಲ್ಲಿ ವಿಜ್ಞಾನ ಬೆಳವಣಿಗೆಯಲ್ಲಿ ಕಾಲ ಕಾಲಕ್ಕೆ ಹುಟ್ಟಿ ಬೆಳೆದುಕೊಂಡು ಬಂದ ಬೈಲಾಟ, ಯಕ್ಷಗಾನ, ನಾಟಕ, ಜಾನಪದ, ಹಾಡು ಹಲವಾರು ಕಲೆ ನಾಶದ ಹಾದಿ ಹಿಡಿದಂತೆ, ಗಾದೆ ವೇದ ಸಮಾನ, ಜಾನಪದ ಜನಾಂಗದ ಹಿರಿಯರ ಆಸ್ತಿ ಎಂದು ಹೇಳಿಕೊಳ್ಳುತ್ತ ಬಂದಂತೆ ಕುರುಬ ಜನಾಂಗ ಉಳಿಸಿಕೊಳ್ಳುವ ಪ್ರಯತ್ನ ಆಗಬೇಕಾಗಿದೆ.

ಇಲ್ಲಿ ಹೇಳಿರುವ ಹಬ್ಬದ ಸಂಪ್ರದಾಯ, ಆಚರಣೆಗಳಲ್ಲಿ ಅನೇಕ ಜಾನಪದ ಅಂಶಗಳನ್ನು ಇಂದಿಗೂ ಗುರುತಿಸಬಹುದಾಗಿದೆ. ಎಂಥ ಶಿಷ್ಟಪರ ಸಮಾಜದಲ್ಲಿಯೂ, ಅನಾದಿ ಕಾಲದಿಂದ ಸಾಗಿ ಬಂದ ಅನೇಕ ಜನಪದ ರೂಢಿ ವಿಧಿ ಕ್ರಿಯೆಗಳು ಒಂದಲ್ಲ ಒಂದು ಸ್ಥರದಲ್ಲಿ ಬೆರೆತು ಉಳಿದು ಬಂದಿರುವುದು ಸಹಜ.

ಅತೀತ ಶಕ್ತಿಯಲ್ಲಿ ನಂಬಿಕೆ ಹುಟ್ಟಿ, ಶ್ರದ್ಧೆಯಲ್ಲಿ ಗಟ್ಟಿಗೊಂಡು, ಮಾನವ ಕ್ಷೇಮ ಪಾಲನೆಯ ಕಲ್ಯಾಣ ಸಾಧನೆಯ ಪ್ರತೀಕವಾಗಿ ವ್ರತ ಆಚರಣೆಗಳ ಸಂಪ್ರದಾಯದಲ್ಲಿ ಮುಂದುವರೆದು ಒಂದು ಜಾತ್ರೆ, ಪ್ರಕೃತಿಯ ಆರಾಧನೆ, ದೇವತಾ ಪೂಜೆ, ದೇವರ ಕೃಪೆ, ಮಂತ್ರ ಮಾಟ, ಸ್ತುತಿ ಪಠಣ, ನೃತ್ಯ, ಭಜನೆ, ಕಾಣಿಕೆ, ಬಲಿ ಸಮರ್ಪಣೆ ಮುಂತಾದವುಗಳನ್ನೊಳಗೊಂಡ ಒಂದು ಜನಾಂಗದ ವಿವಿಧ ಮುಖದ ಬದುಕಿನ ಸಮಾರಾಧನೆಯಾಗಿರುವ ಹಬ್ಬ ಒಂದು ಸಂಕೀರ್ಣ ಸಾಂಸ್ಕೃತಿಕ ಘಟಕವಾಗಿದೆ.

ಸಾಮಾನ್ಯವಾಗಿ ಪ್ರತಿ ವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭದಲ್ಲಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ ಜಟಿಲ ಘಟಕವೇ ಹಬ್ಬವಾಗಿರುವುದರಿಂದ ಇಂದಿಗೂ ಧಾರಾಳವಾಗಿ ಆಚರಣೆಯಲ್ಲಿರುವ ಹಬ್ಬಗಳ ಜಾನಪದ ವಿವೇಚನೆ, ವಿಶ್ಲೇಷಣೆಗಳು ಇಂದು ನಡೆಯಬೇಕಾಗಿರುವ ಅಗತ್ಯತೆಯನ್ನು ಮತ್ತು ಸಂಸ್ಕೃತಿಯ ಪರಂಪರೆಗಳ ಅನೇಕ ಪಾರ್ಶ್ವಗಳ ಹೊಸ ಅರಿವು ಮೂಡುವುದರಲ್ಲಿ ಯಾವುದೇ ಸಂದೇಹವಿಲ್ಲ.

ಒಟ್ಟಿನಲ್ಲಿ "ಹಾಲುಮತ" ದೈವಗಳು ರಾಯಬಾಗ ತಾಲೂಕಿನ ಬಹುಜನ ಕುರುಬರ ಜೊತೆಗೆ ಒಂದು ಜನಪದ ಸಂಸ್ಕೃತಿಯ ಅವಿಭಾಜ್ಯ ಮತ್ತು ಮಹತ್ವದ ಘಟಕಗಳಾಗಿ ಕೆಲಸ ನಿರ್ವಹಣೆ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಸಾಂಸ್ಕೃತಿಕ ಅಧ್ಯಯನಕ್ಕೆ ಹಾಲುಮತದ ಕೊಡುಗೆ ರಾಯಬಾಗದಿಂದ ಬಹಳವಲ್ಲದಿದ್ದರೂ ಸ್ವಲ್ಪವಾದರೂ ಆಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

. . .

# ಅನುಬಂಧ : ೧



ಶ್ರೀ ಮಾಯಕ್ಕದೇವಿ



ಕಿಲಕಟ್ಟಿಯಲ್ಲಿಯ ಪೂಜಾಸ್ಥಳ



ಮಾಯಕ್ಕನ ಕುದುರೆ



ಶ್ರೀ. ಲಕ್ಷ್ಮೀದೇವಿ, ಬೆಕ್ಕೇರಿ





ಶ್ರೀ ಯಲ್ಲಾಲಿಂಗ ಅಜ್ಜನವರು
ಮುಗಳಖೋಡ

## ಅನುಬಂಧ : ೨

# : ಪರಾಮರ್ಶನ ಗ್ರಂಥಗಳು :

| ಅ.ನಂ | ಲೇಖಕರ ಹೆಸರು | ಕೃತಿ | ಪ್ರಕಾಶನ | ಪ್ರ.ವರ್ಷ |
|---|---|---|---|---|
| ೧. | ಅಲಬ್ಭೈರಿ ಕವಿಯ ಡೊಳ್ಳಿನ ಹಾಡುಗಳು | ಅಪ್ರಕಟಿತ ಕೃತಿ ಸಂ. ಡಾ. ಆರ್. ಬಿ. ಚಿಲಮಿ | | |
| ೨. | ಗಂಗಾಧರ ದೈವಜ್ಞ | ಮಾಳಿಂಗರಾಯನ ಕಾವ್ಯ (ಅಡಿವೆಪ್ಪ ಒಡೆಯರ ಹಾಡಿದ) | ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ | ೧೯೯೯ |
| ೩. | ಚಂದ್ರಕಾಂತ ಬಿಜ್ಜರಗಿ | ಕುರುಬರ ಹೆಜ್ಜೆಗಳು ಒಂದು ಅಧ್ಯಯನ | ಶೈಲಚಂದ್ರ ಪ್ರಕಾಶನ ವಿಜಾಪೂರ | ೨೦೦೬ |
| ೪. | ಡಾ. ಟಿ. ಎಫ್. ಹಳ್ಳಿಕೇರಿ | ಕುರುಬರ ಗುರು ಒಡೆಯರು | ವಿಕಾಸ ಪ್ರಕಾಶನ ಶೋಧನ ಶಿಕ್ಷಕರ ಬಡಾವಣೆ, ಎಂ. ಪಿ. ಪ್ರಕಾಶ ನಗರ, ಹೊಸಪೇಟೆ. | ೨೦೦೭ |
| ೫. | ಎನ್. ಬಿ. ತೊಂಟಾಪುರ | ತೇಜೋಮಯ ಹಾಲುಮತ ಪುರಾಣ | ಶಿವ ಪದ್ಮ ಪ್ರಕಾಶನ, ಬೆಂಗಳೂರು. | ೧೯೯೨ |
| ೬. | ಬ. ಪ. ನಾಯ್ಕರ | ಹಾಲು ಮತಸ್ಥರು | ವಿದ್ಯಾನಿಧಿ ಪ್ರಕಾಶನ, ಗದಗ. | ೨೦೦೩ |
| ೭. | ಬೋನಾ ಬಸವರಾಜ | ಹಾಲುಮತದ ಹುಟ್ಟು | ವಿದ್ಯಾನಿಧಿ ಪ್ರಕಾಶನ, | ೨೦೦೦ |
| ೮. | ಡಾ. ವಾಯ್. ಕೆ. ಗುಂಡಕರ್ಜಗಿ | ಹಾಲುಮತದ ಚರಿತ್ರೆ | ವಿಜೇತ ಪ್ರಕಾಶನ, ಗದಗ. | ೨೦೦೫ |

| ಅ.ನಂ | ಲೇಖಕರ ಹೆಸರು | ಕೃತಿ | ಪ್ರಕಾಶನ | ಪ್ರ.ವರ್ಷ |
|---|---|---|---|---|
| ೯. | ಡಾ. ವೀರಣ್ಣ ದಂಡೆ | ಜನಪದ ಹಾಲು ಮತ ಮಹಾಕಾವ್ಯ | ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. | ೨೦೦೦ |
| ೧೦. | ಡಾ. ವಿರೇಶ ಶೇ. ಬಡಿಗೇರ | ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ. | ವಿಮೋಚನಾ ಪ್ರಕಾಶನ, ಅಥಣಿ. | ೧೯೯೯ |
| ೧೧. | ಶ. ಶಿ. ಕುಂಬಾರ | ಹಾಲುಮತದ ಶರಣರ ಚರಿತ್ರೆ ಹಾಗೂ ವಚನಗಳು | ವಿಜೇತ ಪ್ರಕಾಶನ, ಗದಗ. | ೨೦೦೮ |
| ೧೨. | ಡಾ. ಶ್ರೀರಾಮ ಇಟ್ಟಣ್ಣವರ | (ಸಂ) ಹಾಲಕೆನೆ | ಶ್ರೀ ಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪೂರ | ೨೦೦೨ |
| ೧೩. | ಡಾ. ಶಂ. ಬಾ. ಜೋಶಿ | ಹಾಲುಮತ ದರ್ಶನ | ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ | ೧೯೯೭ |
| ೧೪. | ಡಾ. ಎಸ್. ಎಮ್. ವೃಷಭೇಂದ್ರಸ್ವಾಮಿ | ಜಾನಪದ ಸಾಹಿತ್ಯ ದರ್ಶನ ಭಾಗ-೧೦ | ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿ. ವಿ. ಧಾರವಾಡ. (ಪ್ರಸಾರಾಂಗ) | ೧೯೮೭ |
| ೧೫. | ಡಾ. ಸಿದ್ಧಲಿಂಗಯ್ಯ | ಗ್ರಾಮದೇವತೆಗಳು | ಮೂಲಭಾರತಿ ಪ್ರಕಾಶನ, ಬೆಂಗಳೂರು. | ೧೯೯೭ |
| ೧೬. | ಮದಗೊಂಡೇಶ್ವರ ಮಹಾರಾಜರು, ಮನಮಿ | ಸಿದ್ಧಸಿರಿ | ------- | ೧೯೯೭ |

